# ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್ ಸಂಪ್ರಬಂಧ)

ಸಂಶೋಧಕ
ಗಿರಿಯಪ್ಪ ಡಿ. ಜೋಗಣ್ಣವರ

ಮಾರ್ಗದರ್ಶಕರು
ರಮೇಶ ನಾಯಕ
ಹಿರಿಯ ಶ್ರೇಣಿ ಅಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ






ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೦೮

# ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್ ಸಂಪ್ರಬಂಧ)



ಸಂಶೋಧಕ

ಗಿರಿಯಪ್ಪ ಡಿ. ಜೋಗಣ್ಣವರ

ಮಾರ್ಗದರ್ಶಕರು

ರಮೇಶ ನಾಯಕ

ಹಿರಿಯ ಶ್ರೇಣಿ ಅಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೮

# ಪ್ರಮಾಣ ಪತ್ರ

ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ರಮೇಶ ನಾಯಕ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 30-10-2008

ಗಿರಿಯಪ್ಪ ಡಿ. ಜೋಗಣ್ಣವರ
ಸಂಶೋಧಕ
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕವಿಹಂ, ವಿದ್ಯಾರಣ್ಯ

# ದೃಢೀಕರಣ ಪತ್ರ

ಗಿರಿಯಪ್ಪ ಡಿ.ಜೋಗಣ್ಣವರ ಇವರು ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಳಿಗೆ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ರಮೇಶ ನಾಯಕ<br>
ಹಿರಿಯ ಶ್ರೇಣಿ ಅಧ್ಯಾಪಕರು<br>
ಪ್ರಾಚೀನ ಇತಿಹಾಸ ಮತ್ತು<br>
ಪುರಾತತ್ವ ಅಧ್ಯಯನ ವಿಭಾಗ<br>
ಕವಿಹಂ, ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ<br>
ದಿನಾಂಕ : 30/10/2008

# ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ

## ಪರಿವಿಡಿ

# ಕರ್ನಾಟಕ ರಾಜ್ಯ ನಕಾಶೆ




ಬೆಳಗಾವಿ ಜಿಲ್ಲೆ
ಬಾಗಲಕೋಟೆ ಜಿಲ್ಲೆ
ನರಗುಂದ ತಾಲೂಕು
ರೋಣ ತಾಲೂಕು
ಕೊಪ್ಪಳ ಜಿಲ್ಲೆ
ಗದಗ ತಾಲೂಕು
ಧಾರವಾಡ ಜಿಲ್ಲೆ
ಮುಂಡರಗಿ ತಾಲೂಕು
ಶಿರಹಟ್ಟಿ ತಾಲೂಕು
ಹಾವೇರಿ ಜಿಲ್ಲೆ
ಬಳ್ಳಾರಿ ಜಿಲ್ಲೆ

ಗದಗ ಜಿಲ್ಲೆ


ಗದಗ ತಾಲೂಕು
ಯಲಬುರ್ಗ ತಾಲೂಕು
ಡಂಬಳ
ಮೇವುಂಡಿ
ಕೊಪ್ಪಳ ತಾಲೂಕು
ಹಿರೇವಡ್ಡಟ್ಟಿ
ಮುಂಡರಗಿ
ಶಿರಹಟ್ಟಿ ತಾಲೂಕು
ತುಂಗಭದ್ರಾ ನದಿ

ಮುಂಡರಗಿ ತಾಲ್ಲೂಕು




೧. ಡಂಬಳ : ದೊಡ್ಡಬಸಪ್ಪ ದೇವಾಲಯದ ತಲನಕ್ಷೆ

# ಅಧ್ಯಾಯ ೧ ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸ್ವರೂಪ

ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪ್ರಸ್ತಾವನೆ

ಒಂದು ಪ್ರದೇಶದಲ್ಲಿಯ ಪ್ರತಿಯೊಂದು ಭಾಗದ ಇತಿಹಾಸ ಮತ್ತು ಸಂಸ್ಕೃತಿ ಅಧ್ಯಯನದ ಸಮನ್ವಯದಿಂದ ಅದರ ಒಟ್ಟಾರೆ ಇತಿಹಾಸ ತಿಳಿಯುತ್ತದೆ. ಗತಕಾಲದ ಸಮಗ್ರ ಜೀವನಕ್ಕೆ ಸಂಬಂಧಿಸಿದ ಸಂಗತಿಗಳ ಹಾಗೂ ಅವುಗಳಿಗೆ ಮೂಲಭೂತವಾಗಿ ಪ್ರೇರಕವಾಗಿದ್ದಿರಬಹುದಾದ ಶಕ್ತಿ ಪ್ರವೃತ್ತಿಗಳನ್ನು ಸುವ್ಯಸ್ಥಿತವಾಗಿರುವ ದಾಖಲೆಗಳನ್ನು, ಸಾಧನ ಆಕರ ಸಾಮಾಗ್ರಿಗಳನ್ನು ಆಧರಿಸಿ ವಸ್ತುನಿಷ್ಠವಾಗಿ ವಿವೇಚಿಸುವ ಸುಸಂಭದ್ಧ ನಿರೂಪಣೆಯೇ ಇತಿಹಾಸವಾಗಿರುತ್ತದೆ. ಹೀಗೆ ಇತಿಹಾಸವೆಂಬುದು ನಿರಂತರ ಚಲನಶೀಲವಾದದ್ದು ಅದು ಬದಲಾವಣೆಯ ಪ್ರಕ್ರಿಯೆಗೆ ಒಳಗಾಗುತ್ತಲೇ ಮುಂದುವರೆಯುತ್ತದೆ. ಈ ಬದಲಾಗುವ ಪ್ರಕ್ರಿಯೆಗಳನ್ನು ಅಥವಾ ಘಟನೆಗಳನ್ನು ಅಧ್ಯಯನದ ಚೌಕಟ್ಟುಗಳಿಗೆ ಒಳಗು ಮಾಡಿಕೊಂಡು ವಸ್ತುನಿಷ್ಟವಾದ ಫಲಿತಾಂಶವನ್ನು ಕಂಡುಕೊಳ್ಳುವುದು ಇತಿಹಾಸದ ಅಧ್ಯಯನಗಳ ಮುಖ್ಯ ಗುರಿಯಾಗಿರುತ್ತದೆ.

ಸೃಜನಾತ್ಮಕ ಮತ್ತು ಬೌದ್ಧಿಕ ಚಟುವಟಿಕೆಯಾದ ಸಂಶೋಧನೆಯು ಇಂದು ವಿಶಾಲ ವ್ಯಾಪ್ತಿಯನ್ನು ಹೊಂದಿದ್ದು ಅನೇಕ ಭಿನ್ನ ಭಿನ್ನ ಕ್ಷೇತ್ರಗಳಲ್ಲಿ ಅದು ಕಾರ್ಯೋನ್ಮುಖವಾಗಿ ಹೊಸ ಹೊಸ ವಸ್ತುನಿಷ್ಟ ಫಲಿತಾಂಶಗಳನ್ನು ಬೆಳಕಿಗೆ ತಂದಿದೆ. ಇತಿಹಾಸ ರಚನಾಶಾಸ್ತ್ರದ ಅಧ್ಯಯನದಲ್ಲೂ ಈ ರೀತಿಯ ಕಾರ್ಯಗಳನ್ನು ಕೈಗೊಂಡಿದೆ ಹಾಗೂ ಕೈಗೊಳ್ಳುತ್ತಲಿದೆ. ಈ ಸಂಶೋಧನೆಯ ಆಲೋಚನೆಯ ಆಯಾಮಗಳು ಗಟ್ಟಿಗೊಂಡಂತೆ ಅಧ್ಯಯನ ಶಿಸ್ತುಗಳ ಫಲಿತಾಂಶದಲ್ಲಿ ಅದರ ವಿಶ್ವಾಸಾರ್ಹತೆ, ಮಹತ್ವ ಹೆಚ್ಚುತ್ತದೆ. ಇದರಿಂದಾಗಿ ಹೊಸ ಹೊಸ ವಿಚಾರಗಳು, ವಿಷಯಗಳು ಬೆಳಕಿಗೆ ಬರುತ್ತವೆ. ಹಾಗಾಗಿ ಪ್ರತಿಯೊಂದು ಪ್ರದೇಶವು ಒಂದೊಂದು ವಿಶಿಷ್ಟತೆಯ ಅಂಶಗಳಿಂದ ಕೂಡಿರುವುದರಿಂದ ಅದಕ್ಕೆ ಅನ್ವಯವಾಗವ ಅಧ್ಯಯನ ವಿಧಾನಗಳನ್ನು ಸಂಶೋಧನೆಯಲ್ಲಿ ಅಳವಡಿಸಿಕೊಳ್ಳುವದು ಯೋಗ್ಯವಾದುದು.

ಸದಾ ಹೊಸ, ಹೊಸದನ್ನು ಅನ್ವೇಷಿಸುವ ದಿಶೆಯಲ್ಲಿ ಚರಿತ್ರಕಾರ/ಸಂಶೋಧಕನು ತನ್ನ ಕಾರ್ಯತತ್ಪರತೆಯಲ್ಲಿ ಕೇವಲ ಸಾಂಪ್ರದಾಯಿಕ ಆಧಾರಗಳಿಗೆ ಅಥವಾ ಲಿಖಿತ ಮತ್ತು ಪುರಾತತ್ವ

ಆಕರಗಳಿಗೆ ಜೋತು ಬೀಳದೆ ಅವುಗಳು ಲಭ್ಯವಿಲ್ಲದಾಗ ಮೌಖಿಕ ಅಥವಾ ಕಥನ ರೂಪದ ಆಧಾರಗಳನ್ನು ಭಿನ್ನ ದೃಷ್ಟಿಕೋನದಡಿ ಅಧ್ಯಯನ ಮಾಡುವುದು ಅತಿ ಅವಶ್ಯಕವಿದೆ. ಈ ಹಿನ್ನಲೆಯಲ್ಲಿ ಪುರಾತತ್ವ ವಸ್ತುಅವಶೇಷಗಳು ಇತಿಹಾಸ ರಚನೆಗೆ ನೆರವಾದರೆ ಆ ಆಕರಗಳ ಹುಟ್ಟಿನ ಇತಿಹಾಸವನ್ನು ಐತಿಹ್ಯಗಳು ಬಿಚ್ಚಿಡುತ್ತವೆ. ಹೀಗಾಗಿ ಐತಿಹ್ಯಗಳು ಇತಿಹಾಸದ ಆಕರಗಳು ಹೌದು, ಆಕರಗಳ ಇತಿಹಾಸವು ಹೌದು. ಈ ಕಾರಣವಾಗಿ ಪುರಾತತ್ವ ಆಕರಗಳೊಂದಿಗೆ ಸ್ಥಳೀಯ ಸಂಸ್ಕೃತಿಯ ಪ್ರತಿಬಿಂಬಗಳಾದ ಮೌಖಿಕ ಕಥನಗಳನ್ನು/ಐತಿಹ್ಯಗಳ ಸಂಬಂಧವನ್ನು ಇತಿಹಾಸದ ಅಧ್ಯಯನಗಳಿಗೆ ಪೂರಕವಾಗಿ ಬಳಸಿಕೊಂಡು ಪುರಾತತ್ವ ಆಕರಗಳನ್ನು ಪ್ರಮಾಣೀಕರಿಸುವ ಹೊಸ ವಿಧಾನವನ್ನು ಅಳವಡಿಸಿಕೊಳ್ಳುವ ಪ್ರಸ್ತುತತೆ ಇದೆ.

ಮೌಖಿಕ ಪರಂಪರೆಗೆ ಮನುಷ್ಯನ ಚಟುವಟಿಕೆಗಳನ್ನು ಜೀವಂತವಾಗಿ ಉಳಿಸಿಕೊಂಡು ಬರುವ ಶಕ್ತಿಯಿದ್ದರೆ, ಪುರಾತತ್ವ ಆಕರಗಳಿಗೆ ಭೌತಿಕವಾಗಿ ಉಳಿಸಿಕೊಂಡು ಬಂದ ಹೆಗ್ಗಳಿಕೆ ಇರುವುದು. ಪುರಾತತ್ವ ಸಂಶೋಧನೆಯಲ್ಲಿ ದೊರೆಯುವ ಆಕರಗಳಿಗೆ ಸಂಬಂಧಿಸಿದ ವಿವರಣೆಯನ್ನು ನೀಡುವ ಸಾಮರ್ಥ್ಯ ಪರಂಪರೆಯಿಂದ ಸಾಧ್ಯವಾಗುತ್ತದೆ. ಆದ್ದರಿಂದ ಪುರಾತತ್ವ ಮತ್ತು ಐತಿಹ್ಯಗಳನ್ನು ಸಮೀಕರಿಸಿದ ಅಧ್ಯಯನಗಳನ್ನು ಕೈಗೊಳ್ಳುವ ಅವಶ್ಯಕತೆಯಿದೆ.

ಅಧ್ಯಯನ ಕ್ಷೇತ್ರವಾದ ಮುಂಡರಗಿ ಪರಿಸರದಲ್ಲಿ ಲಿಖಿತವಾಗಿರುವ ಮತ್ತು ಪ್ರತ್ಯಕ್ಷವಾಗಿ ಕಂಡುಬರುವ ಪುರಾತತ್ವ ಭೌತಿಕ/ಆಕರಗಳ ಜೊತೆ ಜೊತೆಗೆ ಈ ಪ್ರದೇಶದಲ್ಲಿ ಗುಪ್ತಗಾಮಿನಿಯಾಗಿ ಹರಡಿಕೊಂಡಿರುವ ಜನಸಾಮಾನ್ಯರ ನೆನಪುಗಳ ಮೂಲಕ ಉಳಿದುಕೊಂಡು ಬಂದಿರುವ ಮೌಖಿಕ ಆಕರಗಳ ಕವಲುಗಳಾದ ಪರಂಪರೆ, ಕಥನ, ಕಾವ್ಯ, ನಂಬಿಕೆ. ಸಂಪ್ರದಾಯ, ಆಚರಣೆ, ಪುರಾಣ, ಐತಿಹ್ಯ ಮುಂತಾದ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ಪುರಾತತ್ವ ಇತಿಹಾಸ ರಚಿಸುವುದು ಬಹುಮುಖ್ಯವಾಗಿದೆ. ದಾಖಲಾಗಿರುವ ಅವಶೇಷಗಳಲ್ಲಿ ವ್ಯಕ್ತವಾಗಲಾರದ ಅನೇಕ ಚಾರಿತ್ರಿಕ ಸಂಗತಿಗಳು ಮೌಖಿಕ ಕಥನಗಳಲ್ಲಿ ಅಡಗಿಕೊಂಡಿರುವುದರಿಂದ ಇವುಗಳನ್ನು ಇತಿಹಾಸದ ಅಧ್ಯಯನ ವಿಧಾನಗಳಿಗೆ ಒಳಪಡಿಸುತ್ತಾ ಭಿನ್ನ ಬಗೆಯ ಚರಿತ್ರೆಯನ್ನು ನಿರ್ಮಿಸುವುದು ಅವಶ್ಯವಾಗಿದೆ. ಪ್ರಸ್ತುತ 'ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ' ಎಂಬ ಶೀರ್ಷಿಕೆಯನ್ನುಳ್ಳ ಈ ಅಧ್ಯಯನದಲ್ಲಿ ಈ ಮೇಲಿನ ಮುಖ್ಯ ಉದ್ದೇಶವನ್ನಿಟ್ಟುಕೊಂಡು ರೂಪಿಸುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಮುಂಡರಗಿ ಪರಿಸರವು/ತಾಲೂಕು ಪ್ರದೇಶವು ಗದಗ ಜಿಲ್ಲಾ ವ್ಯಾಪ್ತಿಗೆ ಒಳಪಟ್ಟಿದ್ದು ಜಿಲ್ಲಾ ಕೇಂದ್ರದಿಂದ ೩೬ಕಿ.ಮೀ. ದೂರದಲ್ಲಿದೆ. ಕವಿರಾಜಮಾರ್ಗಕಾರ ತಿಳಿಸುವ ತಿರುಳ್ಗನ್ನಡನಾಡಿನ ಬಹುಪಾಲು ಭಾಗವನ್ನು ಒಳಗೊಂಡಿರುವ ಗದಗ ಜಿಲ್ಲೆ ಇತಿಹಾಸದಲ್ಲಿ ವೈವಿಧ್ಯಮಯವಾದ ವೈಶಿಷ್ಟತೆಗಳನ್ನು ಸಂಪಾದಿಸಿಕೊಂಡು ಬಂದ ಜಿಲ್ಲೆಗಳಲ್ಲೊಂದಾಗಿದೆ. ಈ ಗದಗ ಜಿಲ್ಲೆಯು ತನ್ನ ವ್ಯಾಪ್ತಿಯಲ್ಲಿ ಶಿರಹಟ್ಟಿ, ನರಗುಂದ, ಮುಂಡರಗಿ, ರೋಣ, ಗದಗ ಎಂಬ ಐದು ತಾಲೂಕುಗಳನ್ನು ಒಳಗೊಂಡಿದೆ.

ಮುಂಡರಗಿ ಪರಿಸರವು ಪುರಾತತ್ವ ದೃಷ್ಟಿಯಿಂದಲೂ, ಮೌಖಿಕ ಕಥನಗಳ/ಐತಿಹ್ಯಗಳ ದೃಷ್ಟಿಯಿಂದಲೂ, ರಾಜಕೀಯ ಹಿನ್ನಲೆ, ದೇವಾಲಯ, ಶಾಸನ, ಶಿಲ್ಪಾವಶೇಷ, ಆಡಳಿತ ವಿಭಾಗ ಮುಂತಾದ ಹಲವು ಚಾರಿತ್ರಿಕ ಅಂಶಗಳ ಅಧ್ಯಯನ ದೃಷ್ಟಿಯಿಂದ ಮಹತ್ವವುಳ್ಳ ಪ್ರದೇಶವಾಗಿದೆ. ಉತ್ತರಕ್ಕೆ ಗದಗ ತಾಲೂಕು, ದಕ್ಷಿಣಕ್ಕೆ ಬಳ್ಳಾರಿ ಜಿಲ್ಲೆಯ ಹಡಗಲಿ, ಪೂರ್ವಕ್ಕೆ ಕೊಪ್ಪಳ ಜಿಲ್ಲೆಯ ಕೊಪ್ಪಳ ಮತ್ತು ಪಶ್ಚಿಮಕ್ಕೆ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕುಗಳಿವೆ. ಹಾಗೆಯೇ ಉತ್ತರ ದಕ್ಷಿಣವಾಗಿ ಹಳ್ಳಿಕೇರಿ ಮತ್ತು ಕೋರ್ಲಹಳ್ಳಿ ಗ್ರಾಮಗಳು ಹಾಗೂ ಪೂರ್ವಪಶ್ಚಿಮವಾಗಿ ಸಿಂಗಟಾಲೂರು ಮತ್ತು ಮುಂಡರಗಿ ಪಟ್ಟಣವನ್ನು ಮುಂಡರಗಿ ತಾಲೂಕು ಮೇರೆಗಳನ್ನಾಗಿಸಿಕೊಂಡಿದೆ. ಈ ಪ್ರದೇಶದ ಜನಸಂಖ್ಯೆ ೧,೧೬,೩೨೮ ಎಂದು ದಾಖಲಾಗಿದೆ. ಸಹ್ಯಾದ್ರಿ ಸೆರಗೆಂದು ಕರೆಯಲ್ಪಡುವ ಕಪ್ಪತ್ತಗುಡ್ಡದ ಶ್ರೇಣಿಗಳು ಈ ತಾಲೂಕಿನ ಡಂಬಳದ ಹತ್ತಿರ ಮೂರ್ನಾಲ್ಕು ಸಮಾನಂತರ ಶ್ರೇಣಿಯಾಗಿ ಹಬ್ಬಿವೆ. ತುಂಗಭದ್ರಾ ನದಿ ಈ ಪ್ರದೇಶದ ದಕ್ಷಿಣದಲ್ಲಿ ಈಶಾನ್ಯಾಭಿಮುಖವಾಗಿ ಸಾಗಿ ಹೆಸರೂರಿನ ದಕ್ಷಿಣದಲ್ಲಿ ಪೂರ್ವಾಭಿಮುಖವಾಗಿ ಗದಗ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಈಶಾನ್ಯ ದಿಕ್ಕಿನಲ್ಲಿ ಕಪ್ಪುಮಣ್ಣಿನ ಭೂಮಿ ಹೊಂದಿದ್ದು ಉಳಿದಂತೆಲ್ಲಾ ಕೆಂಪು ಭೂ ಪ್ರದೇಶವನ್ನು ಹೊಂದಿರುವ ಈ ಪರಿಸರದಲ್ಲಿ ಜೋಳ, ದ್ವಿದಳ ಧಾನ್ಯಗಳು, ಮೆಣಸಿನಕಾಯಿ, ಶೇಂಗಾ, ಹತ್ತಿ, ಗೋದಿ ಹಾಗೂ ತರಕಾರಿ ತರಹದ ಬೆಳೆಗಳನ್ನು ಬೆಳೆಯಲಾಗುತ್ತದೆ.

ಐತಿಹಾಸಿಕ ಮತ್ತು ಪರಂಪರೆಯನ್ನು ಗೊತ್ತುಪಡಿಸುವ ಕುರುಹುಗಳನ್ನು ಒಳಗೊಂಡ ಮಹತ್ವದ ಹಲವು ಪ್ರಾಚೀನ ಗ್ರಾಮಗಳು ಈ ಪರಿಸರದಲ್ಲಿವೆ. ಅವುಗಳಲ್ಲಿ ಬಿದರಹಳ್ಳಿ, ಡಂಬಳ, ಡೋಣಿ, ಹಿರೇವಡ್ಡಟ್ಟಿ, ಚಿಕ್ಕವಡ್ಡಟ್ಟಿ, ಗುಮ್ಮಗೋಳ, ವಿಠಲಾಪುರ, ಕಕ್ಕೂರು, ಸಿಂಗಟಾಲೂರು, ತಾಮ್ರಗುಂಡಿ, ಬರದೂರು, ಆಲೂರು, ಮೇವುಂಡಿ, ಶಿರೂರು, ಪೇಠಾಲೂರು ಮುಂತಾದವುಗಳಾಗಿವೆ.

ಬಾದಾಮಿ ಚಾಲುಕ್ಯರ ಕಾಲದಿಂದ ವಿಜಯನಗರದವರೆಗೆ ಬೆಳೆದುಬಂದಿರುವ ಈ ಪರಿಸರವು ಆಯಾ ಕಾಲದ ಐತಿಹಾಸಿಕ ಗುರುತುಗಳನ್ನು, ಸಂಸ್ಕೃತಿಯ ವೈವಿದ್ಯತೆಗಳನ್ನು ಗರ್ಭೀಕರಿಸಿಕೊಂಡು ಬಂದಿದೆ. ವಿಭಿನ್ನ ಬಗೆಯ ದೇವಾಲಯಗಳು, ಸ್ಮಾರಕಗಳು, ಶಿಲ್ಪಗಳು, ವಾಸ್ತುಶಿಲ್ಪ, ಕಲೆ ಹಾಗೂ ಬೌದ್ಧ, ಜೈನ, ನಾಥ,ವೈಷ್ಣವ ಮುಂತಾದ ಪರಂಪರೆಗಳ ಗುರುತುಗಳು ಉಳಿದುಕೊಂಡು ಬಂದಿವೆ. ಐತಿಹಾಸಿಕ ಮಹತ್ವವನ್ನು ಕಟ್ಟಿಕೊಡುವ ಈ ಪರಿಸರದ ಪುರಾತತ್ವ ಅವಶೇಷಗಳು ಮತ್ತು ಐತಿಹ್ಯಗಳನ್ನು ಸಮನ್ವಯಗೊಳಿಸಿಕೊಂಡು ವಿಶ್ಲೇಷಿಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

### ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯಗಳನ್ನು ಕುರಿತಾಗಿರುವುದರಿಂದ ಈ ಪರಿಸರದಲ್ಲಿರುವ ಭೌತಿಕ ಆಕರಗಳು ಅಥವಾ ಪ್ರತ್ಯಕ್ಷವಾಗಿ ಕಂಡುಬರುವ ಪುರಾತತ್ವ ಆಕರಗಳ ಹಿನ್ನೆಲೆಯಲ್ಲಿಯ ಐತಿಹಾಸಿಕ ಅಂಶಗಳನ್ನು ಜನಪದರ ಮೌಖಿಕ ಪರಂಪರೆಯ

ನೆನಪುಗಳು ಹೇಗೆ ನಿರ್ಧರಿಸುತ್ತವೆ ಎಂಬ ದೃಷ್ಟಿಕೋನವನ್ನು ಹಾಗೆಯೇ ಮೌಖಿಕ ಕಥನಗಳನ್ನು ಪುರಾತತ್ವ ಆಕರಗಳು ಹೇಗೆ ಸ್ವೀಕರಿಸುತ್ತಿವೆ ಎಂಬುದನ್ನು ತಿಳಿಯಪಡಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಹೊಂದಿದೆ.

ಈ ಪ್ರದೇಶದ ವ್ಯಾಪ್ತಿಯಲ್ಲಿ ಈಗಾಗಲೇ ಕೈಗೊಂಡಿರುವ ಅಧ್ಯಯನಗಳೆಲ್ಲವೂ ದಾಖಲಾಗಿ ಮತ್ತು ಪ್ರತ್ಯಕ್ಷವಾಗಿ ಕಂಡುಬರುವ ಪುರಾತತ್ವ ಆಕರಗಳ ಹಿನ್ನೆಲೆಯಲ್ಲಿ ರಚಿತವಾಗಿರುವಂತಹುಗಳು ಅಂದರೆ ಶಿಷ್ಟ ಚರಿತ್ರೆಯ ಹಿನ್ನೆಲೆಯಲ್ಲಿಯೇ ನಿರ್ಮಿತವಾಗಿವೆ. ಆ ಕಾರಣದಿಂದಾಗಿ ಲಿಖಿತ ದಾಖಲೆಗಳು ಹೇಗೆ ಮಹತ್ವವನ್ನು ಹೊಂದಿವೆಯೋ, ಅವುಗಳಷ್ಟೇ ಮಹತ್ವವನ್ನು ಈ ಕಂಠಸ್ಥ ಪರಂಪರೆಯಿಂದ ಬೆಳೆದು ಬಂದಿರುವ ಮೌಖಿಕ ಕಥನಗಳು/ಐತಿಹ್ಯಗಳು ಹೊಂದಿದೆ. ಅವುಗಳು ಬಹುರೂಪಿ ಸಾಹಿತ್ಯದ ಅಲಕ್ಷಿತರ ಇತಿಹಾಸವನ್ನು ಹೇಗೆ ಪ್ರತಿನಿಧಿಸುತ್ತವೆ ಎನ್ನುವ ಉದ್ದೇಶವನ್ನು ಈ ಅಧ್ಯಯನದಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಸ್ಥಳನಾಮಗಳು ಮತ್ತು ಸ್ಥಳೀಯ ಐತಿಹ್ಯಗಳಿಗೆ ಸಂಬಂಧಿಸಿದ ವಿವರಗಳೆಲ್ಲವೂ ಸ್ಥಳಸಂಬಂಧಿ ಐತಿಹ್ಯಗಳಾಗಿರುವದರಿಂದ ಅವು ಆ ಸ್ಥಳದ ವ್ಯಕ್ತಿಗಳಿಗೋ ಅಥವಾ ಪ್ರಕೃತಿಗೋ ಹೆಚ್ಚು ಹತ್ತಿರವಾಗಿರುವ ಸಾಧ್ಯತೆ ಇರುವುದು. ಒಂದು ಸ್ಥಳಕ್ಕೆ ಇರುವ ಹೆಸರಿನ ಉತ್ಪತ್ತಿಯನ್ನು ಐತಿಹ್ಯಗಳು ಬಿಚ್ಚಿ ಹೇಳುತ್ತವೆ/ಸ್ಪಷ್ಟಪಡಿಸುತ್ತವೆ. ಈ ಪರಿಸರದಲ್ಲಿ ಉದಾಹರಿಸುವ ಅಂತಹ ಪ್ರದೇಶಗಳೆಂದರೆ ಡೋಣಿ, ಮುಂಡರಗಿ, ಆಲೂರು, ಬರದೂರು, ಬಿದರಳ್ಳಿ, ತಾಮ್ರಗುಂಡಿ, ಡೋಣಿ, ಕಲಕೇರಿ ಮುಂತಾದ ಸ್ಥಳಗಳ ಸ್ಥಳನಾಮಗಳು ಮೌಖಿಕ ಕಥನಗಳ ಹಿನ್ನಲೆಯಲ್ಲಿ ಮಹತ್ವವನ್ನು ಹೊಂದಿರುವುದರಿಂದ ಅವುಗಳನ್ನು ದಾಖಲಿಸುವ ಉದ್ದೇಶವನ್ನು ಅಧ್ಯಯನದಲ್ಲಿ ಕೈಗೊಳ್ಳಲಾಗುವುದು.

ಪ್ರಾಚೀನ ಕಾಲದಿಂದಲೂ ದೈವತ್ವದ ಪ್ರತೀಕವಾಗಿ ಪೂಜಿಸಲ್ಪಡುವ ಪೌರಾಣಿಕ ಶಕ್ತಿ ದೇವತೆಗಳು ಹಾಗೂ ಅವುಗಳ ದೇವಾಲಯ ಸ್ಮಾರಕಗಳು ಈ ಪರಿಸರದಲ್ಲಿ ಕಂಡುಬರುತ್ತವೆ. ಉದಾಹರಣೆಗೆ ಡೋಣಿಯ ಡೋಣಿಕವ್ವೆ, ಕಲಕೇರಿಯ ಮಲಿಯಮ್ಮ ದೇವಿ, ಬಿದರಳ್ಳಿಯ ರೇಣುಕಾಂಬೆ ಮುಖ್ಯವಾಗಿವೆ. ಈ ಎಲ್ಲಾ ಶಕ್ತಿ ದೇವತೆಗಳ ಅವುಗಳ ದೇವಾಲಯ ಸ್ಮಾರಕಗಳ ಸಂಬಂಧದ ಹಿನ್ನೆಲೆಯಲ್ಲಿ ಐತಿಹ್ಯಗಳು ತಿಳಿಸುವ ಪೌರಾಣಿಕ ವಿಷಯಗಳನ್ನು ಗೊತ್ತುಪಡಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಒಳಗೊಂಡಿದೆ.

ಪುರಾತತ್ವ ಮತ್ತು ಇತಿಹಾಸಕ್ಕೆ ಸಂಬಂಧಪಟ್ಟಂತ ಅಧ್ಯಯನಗಳು ಹೆಚ್ಚಾಗಿ ದಾಖಲಾಗಿರುವ ಸಂಗತಿಗಳನ್ನು, ಪ್ರತ್ಯಕ್ಷವಾಗಿ ಕಂಡುಬರುವ ಅವಶೇಷಗಳನ್ನು ಆಧರಿಸಿಕೊಂಡು ರಚನೆಗೊಳ್ಳುತ್ತವೆ. ಆದರೆ ಸಮಗ್ರವಾಗಿ ಮತ್ತು ಸೂಕ್ಷ್ಮವಾಗಿ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಈ ದಾಖಲಾದ ಸಂಗತಿಗಳು ಸೋಲುತ್ತವೆ. ಇಂತಹ ಸಂದರ್ಭದಲ್ಲಿ ಸಾವಿರಾರು ವರ್ಷಗಳಿಂದ ನೆನಪಿನಾಳದಲ್ಲಿ ಉಳಿದುಕೊಂಡು ಬಂದಿರುವ ಮೌಖಿಕ ಪರಂಪರೆಗಳಾದ ಕಥನಗಳು ಅಥವಾ ಐತಿಹ್ಯಗಳು ಈ

ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನಗಳನ್ನು ಹೆಚ್ಚಿನಾಂಶ ಪುಷ್ಠಿಗೊಳಿಸುವ ಮತ್ತು ಸದೃಢಗೊಳಿಸುವ ಕಾರ್ಯದಲ್ಲಿ ಯಶಸ್ವಿಯಾಗುತ್ತವೆಂದು ಹೇಳಿದರೆ ತಪ್ಪಾಗಲಾರದು. ಮುಂಡರಗಿ ಪರಿಸರದ ಪುರಾತತ್ವ ಆಕರಗಳನ್ನು ಮತ್ತು ಅಲ್ಲಿರುವ ಐತಿಹ್ಯಗಳನ್ನು ಸಮನ್ವಯಗೊಳಿಸಿಕೊಂಡು ಅಧ್ಯಯನವನ್ನು ಕೈಗೊಳ್ಳುವುದೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಭೌಗೋಳಿಕ ಮತ್ತು ಕಾಲವಧಿ ದೃಷ್ಠಿಯಿಂದ ನಿರ್ದಿಷ್ಟಪಡಿಸಿಕೊಳ್ಳಲಾಗಿದೆ. ಮುಂಡರಗಿ ತಾಲೂಕು ಪರಿಸರದ ಭೌಗೋಳಿಕ ಹಿನ್ನಲೆಯಲ್ಲಿ ಮುಂಡರಗಿ ತಾಲೂಕು ಪರಿಸರದ ಗ್ರಾಮಗಳನ್ನು ಅಧ್ಯಯನಗಳಿಗೆ ಒಳಪಡಿಸಲಾಗುವುದು. ಕಾಲಾವಧಿ ದೃಷ್ಠಿಯಿಂದ ಇತಿಹಾಸ ಪೂರ್ವಕಾಲದಿಂದ ವಿಜಯನಗರದ ಆಡಳಿತಾವಧಿಯವರೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಭೌಗೋಳಿಕವಾಗಿ ಮುಂಡರಗಿ ಪರಿಸರದ ಉತ್ತರ ದಕ್ಷಿಣವಾಗಿ ಹಳ್ಳಿಕೇರಿ ಮತ್ತು ಕೋರ್ಲಹಳ್ಳಿ ಪೂರ್ವಪಶ್ಚಿಮವಾಗಿ ಸಿಂಗಟಾಲೂರು ಮತ್ತು ಮುಂಡರಗಿ ಗಡಿ ಪ್ರದೇಶದವರೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಮೇಲಿನ ಅಂಶಗಳನ್ನು ಕುರಿತು ಇದರಲ್ಲಿ ಸಮಗ್ರ ಅಧ್ಯಯನ ಕೈಗೊಳ್ಳಲಾಗಿದೆ.

### ೧.೩. ಅಧ್ಯಯನದ ವಿಧಾನ

'ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ' ಎಂಬ ಈ ಅಧ್ಯಯನವನ್ನು ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಯನಗಳ ವಿಧಾನಗಳಲ್ಲಿ ನಿರ್ವಹಿಸಲಾಗಿದೆ. ಪ್ರತಿಗ್ರಾಮದ ಪುರಾತತ್ವ ಆಕರಗಳು ಮತ್ತು ಐತಿಹ್ಯಗಳನ್ನು ಸಮಗ್ರವಾಗಿ ಮತ್ತು ಸೂಕ್ಷ್ಮವಾಗಿ ಅವಲೋಕಿಸಿ ವಿಶ್ಲೇಷಿಸುವ ಕಾರ್ಯವಿಧಾನಗಳಿಗೆ ಅಳವಡಿಸಿಕೊಳ್ಳಲಾಗಿದೆ. ಕ್ಷೇತ್ರಾಧಾರಿತ ಮತ್ತು ಪ್ರಕಟಗೊಂಡಿರುವ ಸಂಗತಿಗಳನ್ನು ಸಮನ್ವಯ ಗೊಳಿಸಿಕೊಂಡು ಅಧ್ಯಯನ ಪೂರ್ಣಗೊಳಿಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯದಲ್ಲಿ ಅವಶ್ಯವಿದ್ದಲ್ಲಿ ಛಾಯಾಚಿತ್ರ ತೆಗೆದುಕೊಂಡು ದಾಖಲಿಸುವ ಮೂಲಕ ಹಾಗೂ ಕೆಲವೊಂದು ಪದ್ಯರೂಪದ ಮಾಹಿತಿಗಳನ್ನು ಧ್ವನಿಮುದ್ರಿಸಿಕೊಳ್ಳುವ ಮೂಲಕ, ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

### ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

ಈ ಪರಿಸರಕ್ಕೆ ಸಂಬಂಧಪಟ್ಟಂತೆ ಕೆಲವು ಅಧ್ಯಯನಗಳನ್ನು ಕೈಗೊಳ್ಳಲಾಗಿದೆ. ಇಂತಹ ಹೆಚ್ಚಿನ ಅಧ್ಯಯನಗಳು ಹೆಚ್ಚಾಗಿ ಮಹತ್ವದ ಪುರಾತತ್ವ ಆಕರಗಳನ್ನು ಮತ್ತು ಗ್ರಾಮಗಳನ್ನು ಗಮನದಲ್ಲಿರಿಸಿಕೊಂಡು ನಡೆದಿರುವಂತವುಗಳಾಗಿವೆ. ಕರ್ನಾಟಕದ ದೇವಾಲಯ ಕೋಶ -ಗದಗ ಜಿಲ್ಲೆ ಎಂಬ ಗ್ರಂಥದಲ್ಲಿ ಈ ಪರಿಸರದ ಜಿಲ್ಲೆಗೆ (ಗದಗ) ಸಂಬಂಧಪಟ್ಟಂತೆ ದೇವಾಲಯಗಳ ದಾಖಲೀಕರಣ ಮಾಡುವ ಪ್ರಯತ್ನ ಮಾಡಿದ್ದಾರೆ. ಈ ಪ್ರಯತ್ನಗಳು ಪುರಾತತ್ವ ಪರಿಚಯಾತ್ಮಕ ವಿಧಾನಗಳನ್ನು ಅಳವಡಿಸಿಕೊಂಡಿವೆ. ವ್ಯಾಪ್ತಿಯ ದೃಷ್ಠಿಯಿಂದ ಸಮಗ್ರವಾಗಿ, ಸೂಕ್ಷ್ಮವಾಗಿ ಅವಲೋಕಿಸುವ ಪ್ರಯತ್ನಗಳು

ಕಡಿಮೆ ಎಂದು ಹೇಳಬಹುದು. ಇಂತಹ ಕೊರತೆಗಳನ್ನು ಈ ಅಧ್ಯಯನಗಳ ಮೂಲಕ ತುಂಬಿಕೊಡುವ ಪ್ರಯತ್ನ ಮಾಡಲಾಗುವುದು. ಅಲ್ಲದೇ ಈಗಾಗಲೇ ನಡೆದಿರುವ ಈ ಪರಿಸರದ ಅಧ್ಯಯನಗಳು ಪುರಾತತ್ವ ಸಂಗತಿಗಳನ್ನು ಮುಖ್ಯ ಆಕರಗಳನ್ನಾಗಿ ಬಳಸಿಕೊಂಡು ಕೈಗೊಂಡಿರುವಂತವುಗಳಾಗಿವೆ. ಅವುಗಳಲ್ಲಿ 'ಡಂಬಳ ಮತ್ತು ಪರಿಸರ' 'ಹಾಗೂ ಮಾಸವಾಡಿ-೧೪೦: ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಪಿಎಚ್.ಡಿ. ಮಹಾಪ್ರಬಂಧಗಳು ಪ್ರಮುಖವಾಗಿವೆ. ಆದ್ದರಿಂದ ಪುರಾತತ್ವ ಆಕರಗಳಷ್ಟೇ ಮಹತ್ವದ ಮತ್ತು ಐತಿಹಾಸಿಕ ಆಕರಗಳಾಗಿರುವ ಮೌಖಿಕ ಪರಂಪರೆ ಮತ್ತು ಐತಿಹ್ಯಗಳನ್ನು ಅಧ್ಯಯನ ಚೌಕಟ್ಟಿನಲ್ಲಿ ಒಳಗಾಗಿಸುವ ಪ್ರಯತ್ನ ಮಾಡಲಾಗುವುದು. ಪ್ರಸ್ತುತ ಅಧ್ಯಯನವನ್ನು ಈ ಕೆಳಗಿನಂತೆ ಐದು ಅಧ್ಯಾಯಗಳಲ್ಲಿ ವಿಭಾಗಿಸಿ ಕೊಳ್ಳಲಾಗಿದೆ.

### ೧.೪. ಅಧ್ಯಯನದ ಸ್ವರೂಪ

ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ ಎಂಬ ಶೀರ್ಷಿಕೆಯ ಈ ನಿಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಉಪಶೀರ್ಷಿಕೆಗಳನ್ನು ಒಳಗೊಂಡಂತೆ ಐದು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಇದು ಅಧ್ಯಯನದ ಸಾರವನ್ನು ಹಿಡಿಯಲು ಮಾಡಿದ ಪ್ರಯತ್ನ. ಈ ಐದು ಭಾಗಗಳನ್ನು ಒಳಗೊಂಡ ವಿಷಯ ಮತ್ತು ಅದರ ತಾತ್ವಿಕ ಸ್ವರೂಪ ಹೀಗಿದೆ.

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಮೊದಲನೆ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ. ಜೊತೆಗೆ ಈವರೆಗೆ ನಡೆದ ಅಧ್ಯಯನ ಹಾಗೂ ಪ್ರಸ್ತುತ ಅಧ್ಯಯನದ ವಿಧಾನ, ಸ್ವರೂಪ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ 'ಭೌಗೋಳಿಕ ಹಿನ್ನಲೆ ಮತ್ತು ಪ್ರಾಚೀನತೆ' ಕುರಿತು ಮುಂಡರಗಿ ಪರಿಸರದ ಭೌಗೋಳಿಕ ಸ್ಥಾನಮಾನ, ಬೆಟ್ಟ, ಹವಾಗುಣ, ಜನಸಂಖ್ಯೆ, ಮಣ್ಣು, ಜಲ ಸಂಪತ್ತು, ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ. ಹಾಗೆಯೇ ಈ ಪರಿಸರದ ಪ್ರಾಚೀನತೆಯನ್ನು ಪ್ರಾಗಿತಿಹಾಸದಿಂದ ಅಥವಾ ಶಿಲಾಯುಗದಿಂದ ಹಿಡಿದು ಚಾರಿತ್ರಿಕ ವಿಜಯನಗರ ಅರಸರ ಕಾಲದವರೆಗೆ ಚರ್ಚಿಸುವುದರ ಜೊತೆಗೆ ಅವರ ಆಡಳಿತ ವಿಭಾಗಗಳನ್ನು ಕುರಿತು ಸ್ಥೂಲವಾಗಿ ಪರಿಶೀಲಿಸಲಾಗಿದೆ.

ಪ್ರಬಂಧದ ಮುಖ್ಯ ಭಾಗವಾದ ಮೂರನೆಯ ಅಧ್ಯಾಯದಲ್ಲಿ 'ಪುರಾತತ್ವ ಆಕರಗಳು' ಅದರಲ್ಲಿ ಮುಂಡರಗಿ ಪರಿಸರದ ಪುರಾತತ್ವ ಆಕರಗಳನ್ನು ಅಧ್ಯಯನ ಮಾಡಲಾಗಿದೆ. ಅದರಲ್ಲಿ ಪ್ರಾಚೀನ ನೆಲೆಗಳ ವಿವರಣೆಯಿದೆ ಬಿದರಳ್ಳಿ, ಮೇವುಂಡಿ, ಕಲಕೇರಿ, ಶಿಲಾಯುಗದ ನೆಲೆಗಳ ಬಗ್ಗೆ ಹಾಗೂ ಶೈವ, ವೈಷ್ಣವ, ಶಾಕ್ತ, ಜೈನ ಮತ್ತು ಬೌದ್ಧ ಅವಶೇಷಗಳಾದ ದೇವಾಲಯ ಮತ್ತು ಶಿಲ್ಪಾವಶೇಷಗಳನ್ನು ಕುರಿತು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಐತಿಹ್ಯಗಳ' ಬಗ್ಗೆ ಚರ್ಚಿಸಲಾಗಿದೆ. ಪುರಾತತ್ವ ಅಧ್ಯಯನಗಳ ಜೊತೆ ಜೊತೆಗೆ ಐತಿಹ್ಯಗಳು ಯಾವ ರೀತಿಯಾಗಿ ಸಹಾಯಕವಾಗುತ್ತವೆ. ಎಂಬುದನ್ನು ಶಾಸನೋಕ್ತ

ಐತಿಹ್ಯಗಳ ಮೂಲಕ ಮೌಖಿಕ ಕಥನಗಳೊಂದಿಗೆ ಹಾಗೂ ಸ್ಥಳಾಧಾರಿತ ಐತಿಹ್ಯಗಳೊಂದಿಗೆ ವಿವರಿಸಿ ಪ್ರಸ್ತುತ ಪಡಿಸುವ ಪ್ರಯತ್ನ ಮಾಡಲಾಗಿದೆ.

ಕೊನೆಯ ಅಧ್ಯಾಯ ಸಮಾರೋಪವಾಗಿದ್ದು ಇದು ಒಟ್ಟಾರೆ ಅಧ್ಯಯನದ ಸಂಕ್ಷಿಪ್ತರೂಪ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆಯನ್ನು ಹಾಗೂ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಅಲ್ಲದೇ ನಿರ್ಧಾರಗಳನ್ನು ಪ್ರಕಟಿಸುವ ಪ್ರಯತ್ನಮಾಡಲಾಗಿದೆ.

ಹೀಗೆ ಮುಂಡರಗಿ ಪರಿಸರದ ಪುರಾತತ್ವ ಆಕರಗಳ ಜೊತೆಗೆ ಅಲ್ಲಿಯ ಐತಿಹ್ಯಗಳು ಅವುಗಳಿಗೆ ಪೂರಕವಾಗಿ ಒದಗಿಸುವ ಮಾಹಿತಿಯನ್ನು ಸಮನ್ವಯಗೊಳಿಸುವ ಹಿನ್ನೆಲೆಯಲ್ಲಿ ಸಂಬಂಧಿಸಿದ ಅಧ್ಯಯನವನ್ನು ರೂಪಿಸುವ ಪ್ರಯತ್ನವನ್ನು ಈ ಸಂಪ್ರಬಂಧದಲ್ಲಿ ಮಾಡಲಾಗಿದೆ.

ಅಧ್ಯಾಯ ೨

# ಭೌಗೋಳಿಕ ಪರಿಸರ ಮತ್ತು ಪ್ರಾಚೀನತೆ

## ೨.೧. ಭೌಗೋಳಿಕತೆ

ಒಂದು ಪ್ರದೇಶ ಅಥವಾ ಪರಿಸರದ ಬಗ್ಗೆ ಅಧ್ಯಯನ ಕೈಗೊಳ್ಳುವ ಮೊದಲು ಆಯ್ದುಕೊಂಡ ಪ್ರದೇಶದ ಭೌಗೋಳಿಕ ವಿವರಗಳನ್ನು ತಿಳಿದುಕೊಳ್ಳುವುದು ಅವಶ್ಯಕ. ಏಕೆಂದರೆ ಆಯಾ ಪ್ರದೇಶದ ಜನಜೀವನ ಆ ಪರಿಸರದ ಸ್ವರೂಪ-ಸ್ವಭಾವಗಳನ್ನು ಹಾಗೂ ಭೌಗೋಳಿಕ ವೈಶಿಷ್ಟ್ಯತೆಗಳನ್ನು ತಿಳಿಯದೇ ಯಾವುದೇ ಅಧ್ಯಯನ ಅಪೂರ್ಣವೆನಿಸುವುದು. ಈ ಹಿನ್ನೆಲೆಯಲ್ಲಿ ಆಯಾ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಗಳ ಬೆಳವಣಿಗೆಯಲ್ಲಿ ಅಲ್ಲಿನ ಭೌಗೋಳಿಕ ಪರಿಸರ ಸಂಪತ್ತು ಮತ್ತು ವೈಶಿಷ್ಟ್ಯತೆಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ. ಹೀಗಾಗಿ ರಾಜಕೀಯ ಆಡಳಿತ ಕಾಲದಿಂದ ಹಿಡಿದು ಸಮಾಜ ಹಾಗೂ ಆರ್ಥಿಕ ಅಂಶಗಳು ನೈಸರ್ಗಿಕ ವಿಷಯಗಳನ್ನು ಅವಲಂಬಿಸಿ ರೂಪುಗೊಂಡಿರುವ ಸಂಗತಿಗಳನ್ನು ತಿಳಿಯಬಹುದಾಗಿದೆ. ಆದ್ದರಿಂದ ಅಧ್ಯಯನ ಕೈಗೊಳ್ಳುವ ಸಂದರ್ಭದಲ್ಲಿ ಭೌಗೋಳಿಕ ವೈಶಿಷ್ಟ್ಯ ಮರೆತು ಇತಿಹಾಸ ವಿವೇಚಿಸಲು ಸಾಧ್ಯವಿಲ್ಲವೆಂದು ಹೇಳಿದರೆ ತಪ್ಪಾಗಲಾರದು.

ಒಂದು ಪ್ರದೇಶದಲ್ಲಿರುವ ಪರ್ವತ-ಶ್ರೇಣಿ, ಬೆಟ್ಟ-ಗುಡ್ಡ, ನದಿ-ನದಿಯ ಬಯಲು, ತೀರಪ್ರದೇಶ, ಬಂದರು, ಮಣ್ಣಿನ ರಚನೆ, ಹವಾಗುಣ ಹಾಗೂ ಸಂಪತ್ತು ಮುಂತಾದ ಅಂಶಗಳು ಮಾನವನನ್ನು ಆ ಪ್ರದೇಶದಲ್ಲಿ ವಾಸಿಸುವಂತೆ ಪ್ರೇರೇಪಿಸುತ್ತವೆ. ಅಲ್ಲದೇ ಆ ಪರಿಸರವು ಅಲ್ಲಿನ ಜನಜೀವನ, ಹಾಗೂ ಸಂಸ್ಕೃತಿ ವಿಚಾರಗಳನ್ನು ಅಭಿವೃದ್ಧಿಗೊಳಿಸಲು ಸಹಾಯಕಾರಿಯಾಗಿ ನಿಲ್ಲುತ್ತವೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಮುಂಡರಗಿ ಪರಿಸರದ ಭೌಗೋಳಿಕ ವಿಷಯಗಳನ್ನು ತಿಳಿದುಕೊಳ್ಳಲು ಹಾಗೂ ಪರಿಸರವು ಚರಿತ್ರೆ ಅಂಶಗಳು ಹುಟ್ಟಿಕೊಳ್ಳಲು ಎಷ್ಟರ ಮಟ್ಟಿಗೆ ಪ್ರೇರಕವಾಗಿವೆ ಎಂಬುದನ್ನು ಪರಿಗಣಿಸಿ ಅಧ್ಯಯನ ಮಾಡಿಸಿಕೊಳ್ಳುವುದು ಅವಶ್ಯಕವಾಗಿವೆ. ಈ ಹಿನ್ನೆಲೆಯಲ್ಲಿ ಸ್ಥೂಲವಾಗಿ ಮುಂಡರಗಿ ಪರಿಸರದ ವಿಷಯಗಳನ್ನು ವಿವರಿಸಲಾಗಿದೆ.

### ಎ. ಭೌಗೋಳಿಕ ಸ್ಥಾನ-ಮಾನ

ಕವಿರಾಜ ಮಾರ್ಗಕಾರ ತಿಳಿಸುವ ತಿರುಳ್ಗನ್ನಡನಾಡಿನ ಬಹುಪಾಲು ಭಾಗವನ್ನು ಒಳಗೊಂಡಿರುವ ಗದಗ ಜಿಲ್ಲೆ ಇತಿಹಾಸದಲ್ಲಿ ವೈವಿಧ್ಯಮಯವಾದ ವೈಶಿಷ್ಟ್ಯತೆಗಳನ್ನು ಹೊಂದಿರುವ ಪ್ರದೇಶಗಳಲ್ಲಿ

ಒಂದಾಗಿದೆ. ಈ ಜಿಲ್ಲೆ ಮೊದಲು ಧಾರವಾಡ ಜಿಲ್ಲೆಯ ಪ್ರಮುಖ ತಾಲೂಕು ಕೇಂದ್ರವಾಗಿತ್ತು. ಅಖಂಡವಾಗಿದ್ದ ಧಾರವಾಡ ಜಿಲ್ಲೆಯನ್ನು ಪೂನರ್ವಿಗಂಡಿಸಿರುವುದರಿಂದ ೧೯೯೭ ಆಗಸ್ಟ್ ೨೪ರಂದು ನೂತನ ಗದಗ ಜಿಲ್ಲೆಯನ್ನು ರಚಿಸಲಾಯಿತು. ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಶಿರಹಟ್ಟಿ, ಗದಗ, ಮುಂಡರಗಿ, ನರಗುಂದ ಹಾಗೂ ರೋಣ ತಾಲೂಕುಗಳು[೧] ಸಮಾವೇಶಗೊಂಡಿವೆ.

ವ್ಯಾಪ್ತಿಯಲ್ಲಿ ಮೂರನೇ ದೊಡ್ಡ ತಾಲೂಕಾಗಿರುವ ಮುಂಡರಗಿಯು ವೈವಿಧ್ಯತೆಯಿಂದ ಕೂಡಿರುವುದು. ಈ ತಾಲೂಕು ಪ್ರದೇಶ ೫೩ ಗ್ರಾಮಗಳನ್ನು ಒಳಗೊಂಡಿದ್ದು, ಇವುಗಳನ್ನೆಲ್ಲ ಎರಡು ಹೋಬಳಿಗಳಲ್ಲಿ ವಿಂಗಡಿಸಲಾಗಿದೆ. ಜಿಲ್ಲಾಕೇಂದ್ರದಿಂದ ೩೬ ಕಿ.ಮೀ. ಅಂತರದಲ್ಲಿರುವ ಈ ಪ್ರದೇಶದ ವ್ಯಾಪ್ತಿಯು ೧೫.೦-೧೫.೩೦ ಉತ್ತರ ಅಕ್ಷಾಂಶದವರೆಗೂ, ೭೫, ೩೫ ರಿಂದ ೭೬.೦ ರೇಖಾಂಶದವರೆಗೂ ಹಬ್ಬಿದ್ದು ೮೮೪.೪ ಚ.ಕಿ.ಮೀ. ವಿಸ್ತಾರವುಳ್ಳದ್ದಾಗಿದೆ.[೨] ಇಲ್ಲಿಯ ಜನಸಂಖ್ಯೆ ೧,೧೬,೩೦೯ ಎಂದು ದಾಖಲಾಗಿದೆ.

## ಬಿ. ವಾಯುಗುಣ

ಈ ಪರಿಸರದಲ್ಲಿ ಮಳೆಯ ಪ್ರಮಾಣ ೪೬೪.೫ ಮಿ.ಮಿ. ಇದ್ದು ಹೆಚ್ಚು ಉಷ್ಣತೆಯನ್ನು ಹೊಂದಿದೆ. ಸಾಮಾನ್ಯವಾಗಿ ಉಷ್ಣವಲಯದಲ್ಲಿ ಬರುವ ಈ ಪ್ರದೇಶ ಸಮುದ್ರಮಟ್ಟದಿಂದ ಕಡಿಮೆ ಎತ್ತರದಲ್ಲಿದೆ. ಇಲ್ಲಿಯ ಉಷ್ಣಾಂಶ ಪ್ರಮಾಣ ೪೦° ಡಿಗ್ರಿ ಸೆಲ್ಸಿಯಸ್‌ವರೆಗೆ ದಾಖಲಾಗಿರುವುದನ್ನು ಕಾಣುತ್ತೇವೆ. ಇಲ್ಲಿನ ಭೂ ಪ್ರದೇಶ ಕಪ್ಪು ಮತ್ತು ಕೆಂಪು ಮಣ್ಣಿನಿಂದ ಕೂಡಿದ್ದು, ಈಶಾನ್ಯ ಭಾಗದಲ್ಲಿ ಹೆಚ್ಚಾಗಿ ಕಪ್ಪು ಮಣ್ಣನ್ನು ಹೊಂದಿದ್ದು, ಉಳಿದಂತೆಲ್ಲ ಕೆಂಪು ಮಣ್ಣಿನ ಭೂ ಪ್ರದೇಶವನ್ನು ಹೊಂದಿದೆ. ಮರಳು ಮಿಶ್ರಿತ ಕೆಂಪು ಮಣ್ಣಿನ[೩] ಜೊತೆಗೆ ಉತ್ತರ ಭಾಗದಲ್ಲಿ ಸ್ವಲ್ಪಮಟ್ಟಿನ ಭೂಮಿಯು ಕಪ್ಪು ಮಣ್ಣಿನಿಂದ[೪] ಕೂಡಿದೆ.

ಈ ಪರಿಸರದ ಮುಖ್ಯ ಕೃಷಿ ಒಣಬೇಸಾಯ. ಅಲ್ಲದೇ ಒಣ ಬೇಸಾಯದ ಜೊತೆಗೆ ತೋಟಗಾರಿಕೆಯ ಬೆಳೆಗಳನ್ನು ಸಹ ಅಲ್ಲಲ್ಲಿ ಕಾಣುತ್ತೇವೆ. ಬೆಳೆಯುತ್ತಾರೆ. ಜೋಳ, ಸಜ್ಜೆ, ಗೋಧಿ, ಸೂರ್ಯಪಾನ, ದ್ವಿದಳ ಧಾನ್ಯಗಳು, ಮೆಣಸಿನಕಾಯಿ, ಶೇಂಗಾ, ಹತ್ತಿ, ನವಣೆ, ಹುರುಳಿ, ಈರುಳ್ಳಿ ಹಾಗೂ ತರಕಾರಿ ರೂಪದ ಬೆಳೆಗಳನ್ನು ಬೆಳೆಯಲಾಗುತ್ತದೆ. ಇದೇ ಪರಿಸರದಲ್ಲಿ ಬರುವ ಡಂಬಳ ಗ್ರಾಮ ಪರಿಸರವು ಪೇರಲ ಮತ್ತು ಬಾರೆಹಣ್ಣಿಗೆ ಪ್ರಸಿದ್ಧಿಯನ್ನು ಹೊಂದಿದೆ. ಉಳಿದಂತೆ ದ್ರಾಕ್ಷಿ, ನೇರಳೆ, ದಾಳಿಂಬೆ ಮುಂತಾದ ಹಣ್ಣಿನ ಬೆಳೆಗಳನ್ನು ಬೆಳೆಯಲಾಗುತ್ತದೆ.

## ಸಿ. ಬೆಟ್ಟ-ಕಾಡು

ಒಣ ಬೇಸಾಯ ಹಾಗೂ ವಿಸ್ತಾರವಾದ ಕಪ್ಪುಮಣ್ಣಿನ ಭೂಪ್ರದೇಶವನ್ನು ಈ ಪರಿಸರ ಹೊಂದಿದ್ದರೂ ತನ್ನ ಸುತ್ತಮುತ್ತ ಹೆಚ್ಚು ಬೆಟ್ಟಗಳನ್ನು ಹೊಂದಿದೆ. ಕಿರಿದಾದ ಗುಡ್ಡ ಬೆಟ್ಟಗಳು ಅಮೂಲ್ಯವಾದ ಪ್ರಕೃತಿ ಜನ್ಯ ಸಂಪತ್ತನ್ನು ಒಳಗೊಂಡಿದೆ. ಮಳೆಗಾಲದಲ್ಲಿ ಚಿಗಿತು ಮೈತುಂಬುವ

ಇಲ್ಲಿನ ಕುರುಚಲ ಗಿಡಗಳು ಈ ಪರಿಸರದ ಪ್ರಕೃತಿ ಸೌಂದರ್ಯವನ್ನು ಮನಮೋಹಕಗೊಳಿಸುತ್ತವೆ. ನೆರೆಯ ತಾಲೂಕುಗಳಾದ ಶಿರಹಟ್ಟಿ ಹಾಗೂ ಮುಂಡರಗಿ ತಾಲೂಕುಗಳಲ್ಲಿ ಅರಣ್ಯಸಂಪತ್ತು ಹೇರಳವಾಗಿದೆ.[೫] ಪಶ್ಚಿಮ ದಿಕ್ಕಿನಲ್ಲಿ ಉತ್ತರದಿಂದ ದಕ್ಷಿಣಾಭಿಮುಖವಾಗಿ ಸಹ್ಯಾದ್ರಿ ಸೆರಗೆಂದು ಕರೆಯಲ್ಪಡುವ ಕಪ್ಪತ್ತಗುಡ್ಡದ ಶ್ರೇಣಿಗಳು ಹಬ್ಬಿಕೊಂಡಿವೆ.

**ಕಪ್ಪತ್ತಗುಡ್ಡ**

ಮುಂಡರಗಿ, ಗದಗ ಹಾಗೂ ಶಿರಹಟ್ಟಿ ತಾಲೂಕುಗಳಿಗೆ ಆಸರೆಯಾಗಿ ಸಹ್ಯಾದ್ರಿ ಬೆಟ್ಟದಂತಿರುವ 'ಕಪ್ಪತ್ತಗುಡ್ಡ'ದ ಈ ಭಾಗವು 'ಚಿನ್ನದ ಗುಡ್ಡ' ಎಂದು ಪ್ರಸಿದ್ಧಿ ಪಡೆದಿದೆ. "ಎಪ್ಪತ್ತು ಗಿರಿಯನ್ನು ನೋಡುವುದಕ್ಕಿಂತ ಕಪ್ಪತ್ತಗಿರಿಯನ್ನು ನೋಡುವುದು ಲೇಸು", ಕಣ್ಣು ಇದ್ದಾವ ಕನಕಗಿರಿ ನೋಡಬೇಕು, ಕಾಲ ಇದ್ದಾವ ಕಪ್ಪತ್ತಗಿರಿ ನೋಡಬೇಕು ಎನ್ನುವ ಮಾತುಗಳು ಈ ಭಾಗದ ಜನರ ನಾಲಿಗೆಯ ಮೇಲೆ ಸದಾ ನಲಿದಾಡುತ್ತವೆ. ಕಪ್ಪತ್ತಗಿರಿಯು ಮೂರು ಪರ್ವತಗಳ ಸಂಗಮ ತಾಣವಾಗಿದೆ. ಯರಮಲೆ ಬೆಟ್ಟ, ದ್ರೋಣಗಿರಿ ಹಾಗೂ ಕಪ್ಪತ್ತಗಿರಿ[೬] ಎಂಬ ಹೆಸರಿನಿಂದ ಕರೆಯಲ್ಪಡುತ್ತವೆ.

ಈ ಗುಡ್ಡವು ೬ ರಿಂದ ೧೬ ಕಿ.ಮೀ. ಅಗಲವನ್ನು ಹೊಂದಿದ್ದು ಅತ್ಯುನ್ನತ ಶಿಖರವು ೯೩೭ ಮೀ. ಎತ್ತರವಾಗಿದೆ. ಈ ತಾಲೂಕಿನ ಅರಣ್ಯ ಪ್ರದೇಶದ ವಿಸ್ತೀರ್ಣ ೧೭.೬೪೬ ಹೆಕ್ಟೇರು ಕ್ಷೇತ್ರವನ್ನು ಆವರಿಸಿಕೊಂಡಿದೆ. ಈ ಗುಡ್ಡವು ಒಂದೇ ಶ್ರೇಣಿಯಾಗಿ ಆರಂಭವಾಗಿ, ಮಧ್ಯದಲ್ಲಿ ಡಂಬಳದ ಹತ್ತಿರ ೩-೪ ಸಮಾನಾಂತರ ಶ್ರೇಣಿಗಳಾಗಿ ಕವಲೊಡೆದಿದೆ.[೭] ಮುಂದೆ ಇದು ತುಂಗಭದ್ರಾನದಿಯ ಕಡೆಗೆ ಮತ್ತೆ ಒಂದೇ ಶ್ರೇಣಿಯಾಗಿ ಹಬ್ಬಿದೆ. ಮುಂಡರಗಿ ತಾಲೂಕಿನ ಡೋಣಿ, ಹಿರೇವಡ್ಡಟ್ಟಿ, ಚಿಕ್ಕವಡ್ಡಟ್ಟಿ, ವೀರುಪಾಪುರ, ಮುರಡಿ, ಬಾಗೇವಾಡಿ, ಮಲ್ಲಿಕಾರ್ಜುನಪುರ, ಸಿಂಗಟಾಲೂರು, ಹಮ್ಮಿಗಿ ಮುಂತಾದ ಹಳ್ಳಿಯವರೆಗೆ ಈ ಬೆಟ್ಟ ಶ್ರೇಣಿಗಳ ವಿಸ್ತಾರ ಹರಡಿಕೊಂಡಿದೆ.

ಕಪ್ಪತ್ತಗುಡ್ಡ ಪ್ರದೇಶವು ಅಮೂಲ್ಯವಾದ ಮೂರುನೂರು ಜಾತಿಯ ಔಷಧಿಯ ಸಸ್ಯಗಳನ್ನು ಹೊಂದಿದೆ.[೮] ಅವುಗಳಲ್ಲಿ ಅಂಟವಾಳ, ಬಿಲ್‌ಪತ್ರಿ, ಮದರಂಗಿ, ತುಳಸಿ, ನೆಲಬೇವು, ಒಳಮುಚುಗ, ಅಮೃತಬಳ್ಳಿ, ಶ್ರೀಗಂಧ ಮುಂತಾದವುಗಳಾಗಿವೆ.

**ಡಿ.ಜಲ ಸಂಪತ್ತು**

ತುಂಗಭದ್ರಾ ನದಿಯು ಈ ಭಾಗದಲ್ಲಿ ಹರಿಯುತ್ತಿದ್ದು ಅದು ಇಲ್ಲಿನ ಜಲಸಂಪತ್ತಿಗೆ ಪೂರಕವಾಗಿದೆ. ಇದು ಈ ಜಿಲ್ಲೆಯ (ಗದಗ) ದಕ್ಷಿಣ ಭಾಗದಲ್ಲಿ ಶಿರಹಟ್ಟಿ-ಮುಂಡರಗಿ ತಾಲೂಕುಗಳ ಗಡಿಯಾಗಿ ವಿಸ್ತರಿಸಿದೆ.[೯] ಇದರಿಂದಾಗಿ ಈ ನದಿ ಪರಿಸರದ ಸುತ್ತಮುತ್ತಲಿನ ರೈತರಿಗೆ ಕೃಷಿ ಚಟುವಟಿಕೆಗೆ ಇದು ಸಹಕಾರಿಯಾಗಿದೆ.

ಈ ಪರಿಸರದ ಅತ್ಯಂತ ಪುರಾತನ ಮತ್ತು ಗಾತ್ರದಲ್ಲಿ ದೊಡ್ಡದಾದ ಕೆರೆ ಡಂಬಳ ಗ್ರಾಮದಲ್ಲಿದೆ.[೧೦] ಮುಂಡರಗಿ ತಾಲೂಕಿನ ಡಂಬಳ ಗ್ರಾಮವು ಐತಿಹಾಸಿಕ ಪ್ರಸಿದ್ಧ ಪಟ್ಟಣ.

ಇಲ್ಲಿರುವ ಕೆರೆಯನ್ನು ಸು.೪೫೦ ವರ್ಷಗಳ ಹಿಂದೆ ನಿರ್ಮಿಸಲಾಗಿದೆ. ವಿಜಯನಗರದ ಕಾಲದಲ್ಲಿ ಇದರ ನಿರ್ಮಾಣವಾಗಿರಬಹುದೆಂದು ಅಭಿಪ್ರಾಯಿಸಲಾಗಿದೆ. ಕಪ್ಪು ಮಣ್ಣಿನಿಂದ ನಿರ್ಮಾಣವಾಗಿರುವ ಕೆರೆಯ ಏರಿಯ ಉದ್ದ ೪೦೦೦ ಅಡಿಗಳು ಹಾಗೂ ಎತ್ತರ ೩೫ ಅಡಿ ಈ ಪರಿಸರ ಈ ಕೆರೆಯೇ ಕೃಷಿ ಚಟುವಟಿಕೆಗೆ ಮೂಲವಾಗಿದ್ದು, ನೀರಾವರಿಯ ಒಟ್ಟು ಕ್ಷೇತ್ರ ೧೧೭೫ ಹೆಕ್ಟೇರಾಗಿದೆ. ಇದನ್ನು ವಿಕ್ಟೋರಿಯಾ ರಾಣಿ ಕ್ರಿ.ಶ.೧೮೭೬-೭೭ರಲ್ಲಿ ನಿರ್ಮಿಸಿದ್ದಾಳೆ. ಈ ಕೆರೆಯನ್ನು ೭೭೮ ಜನರಿಂದ ೧೪ ತಿಂಗಳವರೆಗೆ ದುರಸ್ತಿ ಮಾಡಿಸಿ ಅದಕ್ಕೊಂದು ಹೊಸ ಸ್ವರೂಪ ನೀಡಲಾಯಿತೆಂದು ತಿಳಿದುಬರುತ್ತದೆ.[೧೧]

ತಾಲೂಕಿನ ಗ್ರಾಮವಾದ ಜಂತ್ಲಿ ಶಿರೂರುನಲ್ಲಿಯ ಕೆರೆಯನ್ನು ೧೯೬೨ರಲ್ಲಿ ನಿರ್ಮಾಣ ಮಾಡಲಾಯಿತು. ಇದರಿಂದ ೫೦೬ ಹೆಕ್ಟೇರ್ ಭೂಮಿಗೆ ನೀರಿನ ಸರಬರಾಜು ಮಾಡಲಾಗುತ್ತಿದೆ. ೧೯೫೬ರಲ್ಲಿ ನಿರ್ಮಾಣಗೊಂಡ ಆಲೂರು ಕೆರೆ ೩೬೪ ಹೆಕ್ಟೇರ್ ನೀರಾವರಿ ಕ್ಷೇತ್ರವನ್ನು ಹೊಂದಿದೆ. ೧೯೬೫ರಲ್ಲಿ ತಾಮ್ರಗುಂಡಿ ಕೆರೆ ನಿರ್ಮಾಣವಾಗಿ ೨೪೩ಹೆಕ್ಟೇರ್ ಭೂಮಿಗೆ ನೀರಿನ ಸೌಕರ್ಯ ಒದಗಿಸುತ್ತಿದೆ.[೧೨] ಪ್ರಾಚೀನ ಹಾಗೂ ಆಧುನಿಕ ಕಾಲದಲ್ಲಿ ನಿರ್ಮಾಣವಾದ ಈ ಪರಿಸರದಲ್ಲಿರುವ ಕೆರೆಗಳು ವ್ಯವಸಾಯದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

**ಇ.ಪ್ರಾಣಿವರ್ಗ**

ಈ ಪರಿಸರದ ಬೆಟ್ಟ ಪ್ರದೇಶದಲ್ಲಿ ವಿವಿಧ ರೀತಿಯ ಕಾಡು ಪ್ರಾಣಿಗಳು ಕಂಡುಬರುತ್ತವೆ. ಅವುಗಳಲ್ಲಿ ಹೊನ್ನಿಗಾ, ಕಾಡುಮಿಕ, ಚಿಗರಿ, ಕೃಷ್ಣಮೃಗ, ತೋಳ, ನರಿ ಮತ್ತು ಕಾಡು ಹಂದಿ ಮುಂತಾದವುಗಳಾಗಿವೆ. ಎತ್ತು, ನಾಯಿ, ಬೆಕ್ಕು, ಹಸು, ಮೊಲ, ಕುರಿ, ಮೇಕೆಗಳು ಸಾಕು ಪ್ರಾಣಿಗಳಾಗಿರುವುದನ್ನು ಕಾಣುತ್ತೇವೆ. ಹುಲಿ, ಚಿರತೆ ಈ ಮೊದಲು ಕಂಡುಬರುತ್ತಿದ್ದವು. ಪ್ರಸ್ತುತ ಅವುಗಳು ಕಂಡುಬರುವುದಿಲ್ಲ.

**ಎಫ್.ಖನಿಜ ಸಂಪತ್ತು**

ಈ ಪರಿಸರದಲ್ಲಿ ವಿವಿಧ ರೀತಿಯ ಖನಿಜ ಸಂಪನ್ಮೂಲಗಳು ದೊರೆಯುತ್ತವೆ. ಗಣಿಗಾರಿಕೆಗೆ ಸಂಬಂಧಿಸಿದ ಅನೇಕ ವಸ್ತುಗಳು ದೊರೆತಿವೆ. ಕಣಶಿಲೆ, ವಿವಿಧ ವರ್ಣದ ಸುಣ್ಣದ ನಿಕ್ಷೇಪಗಳು ಸಾಕಷ್ಟು ಪ್ರಮಾಣದಲ್ಲಿ ದೊರಕಿವೆ. ಈ ತಾಲೂಕಿನ ಸ್ಥಳಗಳಾದ ಡೋಣಿ ಹತ್ತಿರ ವಿಸ್ತಾರವಾದ ಸುಣ್ಣಕಲ್ಲಿನ ಪರಿಸರವಿದೆ. ಗ್ರಾನೈಟ್ ಮತ್ತು ನೈಸ್ ಶಿಲೆಗಳು ಸಾಮಾನ್ಯವಾಗಿ ಈ ಪ್ರದೇಶಗಳಲ್ಲಿ ಕಂಡುಬರುತ್ತವೆ.[೧೩] ಅದೇ ರೀತಿ ಕಪ್ಪತ್ತಗುಡ್ಡಗಳ ಶ್ರೇಣಿಯಲ್ಲಿ ಕಬ್ಬಿಣದ ಅದಿರು ದೊರಕುತ್ತದೆ. ಇದೇ ಗುಡ್ಡಗಳ ಶ್ರೇಣಿಯಲ್ಲಿ ಚಿನ್ನದ ಅದಿರು ಅಲ್ಪ ಪ್ರಮಾಣದಲ್ಲಿದ್ದು, ವಾಣಿಜ್ಯ ಬಳಕೆಗೆ ಉತ್ಪಾದನೆಯಾಗುವಷ್ಟು ಹೆಚ್ಚಿನ ಪ್ರಮಾಣದಲ್ಲಿ ದೊರೆಯುವುದಿಲ್ಲ[೧೪] ಅತಿ ವಿರಳ ಪ್ರಮಾಣದಲ್ಲಿ ಹೆಮಟೈಟ್, ಕಬ್ಬಿಣ ಮತ್ತು ಬೆಣಚು ಮಿಶ್ರಿತ ನಿಕ್ಷೇಪಗಳು ಸಹ ಇಲ್ಲಿವೆ. ಗ್ರಾನೈಟ್, ನೈಸ್ ಪ್ರಭೇದಗಳನ್ನು ಮಾಗಡಿ ಮತ್ತು ಬರದೂರು ಗ್ರಾಮಗಳಲ್ಲಿ ಕಾಣಬಹುದಾಗಿದೆ.

ಈ ಪರಿಸರದ ಬೆಟ್ಟ ಶ್ರೇಣಿಗಳಲ್ಲಿ ೧೦೦ ಅಡಿ ಎತ್ತರದ ಕಂಬಗಳ ಮೇಲೆ ೨೦ ಮೀಟರ್ ವ್ಯಾಸದ ಅಳತೆಯ ಮೂರು ಬೃಹತ್‌ರೆಕ್ಕೆಯುಳ್ಳ ಪ್ಯಾನ್ ಅಳವಡಿಸಿ ವಿದ್ಯುತ್ ಉತ್ಪಾದಿ,ಸಲಾಗುತ್ತದೆ. ಅವುಗಳು ಗಾಳಿ ಬೀಸುವ ದಿಕ್ಕಿನಲ್ಲಿ ಸ್ವಯಂಚಾಲಿತವಾಗಿ ತಿರುಗಿ ವಿದ್ಯುತ್ ತಯಾರಿಸುವ ಕಾರ್ಯಮಾಡುತ್ತವೆ.

### ೨.೨. ಪ್ರಾಚೀನತೆ

ಮುಂಡರಗಿ ಪರಿಸರದ ವ್ಯಾಪ್ತಿಯಲ್ಲಿ ದೊರೆತಿರುವ ಹಲವು ಪ್ರಾಚೀನ ಅವಶೇಷಗಳು ಇಲ್ಲಿಯ ಪ್ರಾಚೀನತೆಯನ್ನು ಗುರುತಿಸಲು ಸಹಾಯಕವಾಗಿವೆ. ತಾಲೂಕು ಪರಿಸರವು ಪ್ರಸ್ತುತ ಗದಗ ಜಿಲ್ಲೆಯಲ್ಲಿದೆ. ೧೯೯೭ರಲ್ಲಾದ ಜಿಲ್ಲಾ ಪುನರ್ವಿಂಗಡನೆಗೂ ಪೂರ್ವದಲ್ಲಿ ಇದು ಧಾರವಾಡ ಜಿಲ್ಲಾ ವ್ಯಾಪ್ತಿಗೆ ಸೇರಿತ್ತು. ಧಾರವಾಡ ಜಿಲ್ಲೆಯನ್ನು ಒಳಗೊಂಡ ದಕ್ಷಿಣದ ಭಾರತದ ಪ್ರಸ್ಥಭೂಮಿಯನ್ನು ಅತ್ಯಂತ ಪ್ರಾಚೀನವೆಂದೂ, ಆದಿಕಲ್ಪಯುಗಕ್ಕೆ ಸೇರಿದ್ದೆಂದೂ, ಸುಮಾರು ಮೂರುನೂರು ಕೋಟಿ ವರ್ಷಗಳಿಗೂ ಹಿಂದಿನದೆಂದೂ ಭೂ ವಿಜ್ಞಾನಿಗಳ ಅಭಿಪ್ರಾಯವಾಗಿದೆ. ಸಾಗರದ ಭಾಗವಾಗಿದ್ದ ಈ ಪ್ರದೇಶ ಸಮುದ್ರ ನೀರಿನ ಹಿಂಜರಿಕೆಯಿಂದ ಮೇಲೆದ್ದು ಕಾಲಾಂತರದಲ್ಲಿ ಹಲವಾರು ಸ್ಥಿತ್ಯಂತರಗಳನ್ನು ಹೊಂದುತ್ತಾ ಇಂದಿನ ಸ್ಥಿತಿಗೆ ಬಂದಿದೆ. ಪುರಾತನ ಶಿಲಾಯುಗದ ಕಾಲದಿಂದಲೂ ಭಾಗದಲ್ಲಿ ಮತ್ಸ್ಯ, ನಾಗ, ಅಭೀರ, ಮಹಿಷ, ಕೋಲಮಂಡ, ಅಜ, ವಾನರ, ಮೊದಲಾದ ಆದಿವಾಸಿಗಳು ಈ ಭಾಗದಲ್ಲಿ ವಾಸಿಸುತ್ತಿದ್ದುದಾಗಿ ತಿಳಿದುಬಂದಿದೆ.[೧೫]

ಪ್ರಾಗೈತಿಹಾಸಿಕ ನೆಲೆಯ ಪರಿಸರವನ್ನು ಮುಂಡರಗಿ ಪರಿಸರವು ಹೊಂದಿದೆ. ಇದಕ್ಕೆ ಪೂರಕವಾಗಿ ಅಲ್ಲಿರುವ ಬೆಟ್ಟಶ್ರೇಣಿಗಳ ಗುಹೆಗಳು, ಕಲ್ಲಾಸರೆಗಳು, ಅವಶೇಷಗಳು ಮುಂತಾದ ಹಲವು ಭೌಗೋಳಿಕ ಮತ್ತು ಪ್ರಾಕೃತಿಕ ಅಂಶಗಳು ಪ್ರಾಚೀನ ಮಾನವನ ವಾಸ್ತವ್ಯದ ಕುರುಹುಗಳಾಗಿವೆ. ಪರಿಸರದ ಕೆಲವು ಗ್ರಾಮಗಳಲ್ಲಿ ಪ್ರಾಗೈತಿಹಾಸಿಕ ಕಾಲದ ನೆಲೆಗಳು ಕಂಡುಬಂದಿರುವುದರಿಂದ ಇದರ ಪ್ರಾಚೀನತೆ ಶಿಲಾಯುಗ ಸಂಸ್ಕೃತಿಯ ಕಾಲದವರೆಗೂ ಹೋಗಿದೆ. ಅವುಗಳಲ್ಲಿ ಆದಿ ಹಳೆಯ ಶಿಲಾಯುಗ ಸಂಸ್ಕೃತಿಯ ನೆಲೆಯಾಗಿ ಬಿದರಳ್ಳಿ,[೧೬] ನವಶಿಲಾಯುಗದ ನೆಲೆಯಾಗಿ ಮೇವುಂಡಿ[೧೭] ಇತಿಹಾಸ ಆರಂಭ ಕಾಲದ ನೆಲೆಯಾಗಿ ಮೇವುಂಡಿ ಮತ್ತು ಶೀರನಹಳ್ಳಿ,[೧೮] ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯಾಗಿ ಕಲಕೇರಿಗಳು[೧೯] (ಈ ಪರಿಸರದ ಬಸವಣ್ಣಗುಡ್ಡ) ಮುಖ್ಯವಾಗಿವೆ.

ಪ್ರಾಚೀನತೆಯನ್ನು ಅವಲೋಕಿಸುವ ಸಂದರ್ಭದಲ್ಲಿ ಪರಿಸರದಲ್ಲಿ ಆಳ್ವಿಕೆ ಮಾಡಿದ ಅರಸುಮನೆತನಗಳು ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ವಿವಿಧ ಕಾಲಘಟ್ಟಗಳಲ್ಲಿ ಕರ್ನಾಟಕವನ್ನಾಳಿದ ಅನೇಕ ಪ್ರಮುಖ ರಾಜಮನೆತನಗಳ ಸಾಮ್ರಾಜ್ಯದೊಳಗೆ ಈ ಭಾಗವು ಸೇರಿದ್ದಿತಲ್ಲದೆ, ಕೆಲವು ಆಡಳಿತದ ವಿಭಾಗಗಳಿಂದಲೂ ಈ ವಿಷಯ ದೃಢಪಡುತ್ತದೆ. ವಿಸ್ತಾರವಾದ ಐತಿಹಾಸಿಕ, ಹಿನ್ನೆಲೆಯನ್ನು ಹೊಂದಿರುವ ಈ ಪರಿಸರದಲ್ಲಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ,

ಕಲಚೂರಿ, ಸೇವುಣ (ಯಾದವರು) ಹೊಯ್ಸಳ, ವಿಜಯನಗರ ಅರಸರು, ರಾಣಿಯರು, ಮಹಾಮಂಡಲೇಶ್ವರರು, ಸಾಮಂತರು ಆಳ್ವಿಕೆ ಮಾಡಿದ್ದಾರೆ.

ಐತಿಹಾಸಿಕವಾಗಿ ಅತ್ಯಂತ ಮಹತ್ವವನ್ನು ಹೊಂದಿರುವ ಈ ಪರಿಸರವು ಕರ್ನಾಟಕದ ಚರಿತ್ರೆಯಲ್ಲಿ ಹಿರಿದಾದ ಪಾತ್ರ ವಹಿಸಿದೆ. ಕರ್ನಾಟಕ ಸಂಸ್ಕೃತಿಯ ವೈಭವ ಮತ್ತು ವೈಶಿಷ್ಟ್ಯತೆಗಳನ್ನು ಎತ್ತಿ ಹಿಡಿದ ಹಲವು ಮುಖ್ಯ ಪರಿಸರಗಳಲ್ಲಿ/ಪ್ರದೇಶಗಳಲ್ಲಿ ಇದು ಒಂದಾಗಿದೆ. ಚರಿತ್ರೆಯ ದೃಷ್ಟಿಯಿಂದ ನೋಡಿದರೆ ಅನೇಕ ಅರಸುಮನೆತನಗಳ ಬಗ್ಗೆ ಇಲ್ಲಿ ದೊರೆತಿರುವ ಶಾಸನಗಳು ಸ್ಪಷ್ಟಪಡಿಸುತ್ತವೆ.

ಮುಂಡರಗಿ ತಾಲೂಕಿನ ಶಾಸನಗಳನ್ನು ಪರಿಶೀಲಿಸಿದಾಗ ಅವು ರಾಷ್ಟ್ರಕೂಟ ಅರಸರ ಹಾಗೂ ತದನಂತರ ಆಳಿದ ಕಲ್ಯಾಣ ಚಾಲುಕ್ಯ ಅರಸರ ಆಳ್ವಿಕೆಯ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ. ಇದಕ್ಕಿಂತಲೂ ಪೂರ್ವದಲ್ಲಿ ಮುಂಡರಗಿ ನಾಡಿನ ಅಸ್ತಿತ್ವದ ಬಗ್ಗೆ ಯಾವುದೇ ಖಚಿತ ಮಾಹಿತಿಯಿಲ್ಲ. ಹೀಗಾಗಿ ಮುಂಡರಗಿಯ ಪ್ರಾಚೀನತೆಯನ್ನು ಇನ್ನೂ ನಿರ್ಧರಿಸಬೇಕಿದೆ. ಒಂದು ಮೂಲದ ಪ್ರಕಾರ ಮುಂಡರಗಿ ಸಮೀಪದ ಕನಕಗಿರಿಯು ಮೌರ್ಯ ಅರಸನಾದ ಅಶೋಕನ ಆಳ್ವಿಕೆ ಕಾಲದಲ್ಲಿ 'ಸುವರ್ಣಗಿರಿ' ಎಂದು ಕರೆಯಿಸಿಕೊಂಡಿದೆ. ಇದು ಅವನ ದಕ್ಷಿಣದ ಗಡಿ ಪ್ರಾಂತವಾಗಿತ್ತೆಂದು ತಿಳಿದುಬರುತ್ತದೆ. ಈ ಸಂಗತಿಯನ್ನು ಗಮನಿಸಿದರೆ ಮುಂಡರಗಿಯ ಪ್ರಾಚೀನತೆಯು ಮೌರ್ಯರ ಆಳ್ವಿಕೆ ಕಾಲದಿಂದಲೇ ಅಸ್ತಿತ್ವದಲ್ಲಿತ್ತೇ ಎಂಬ ಅನುಮಾನ ಬರುವುದು.[೨೦]

## ರಾಷ್ಟ್ರಕೂಟರು

ಬಾದಾಮಿ ಚಾಲುಕ್ಯರ ತರುವಾಯ ರಾಷ್ಟ್ರಕೂಟರು ಕರ್ನಾಟಕವನ್ನು ಆಳತೊಡಗಿದರು. ಇವರ ಮೂಲಪುರುಷ ದಂತಿದುರ್ಗ.[೨೧] ಸುಮಾರು ಎರಡೂವರೆ ಶತಮಾನಗಳ ಕಾಲ ವಿಶಾಲ ಸಾಮ್ರಾಜ್ಯವನ್ನು ಇವರು ಆಳಿದರು. ಇಂದಿನ ಗುಲಬರ್ಗಾ ಜಿಲ್ಲೆಯನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದ ರಾಜವಂಶ ರಾಷ್ಟ್ರಕೂಟರು. ಬಾದಾಮಿ ಚಾಲುಕ್ಯರ ವಿನಯಾದಿತ್ಯನನ್ನು ಮೂಲೆಗೆ ತಳ್ಳಿ ಆಳಿದ ರಾಜವಂಶವಾಗಿದೆ. ಇವರು ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಸ್ಥಾಪನೆ ಮಾಡಿದರು. ಎಂಟನೇ ಶತಮಾನದ ವೇಳೆಗೆ ದಖನ್ನಿನ ಅಧಿಪತ್ಯವು ಚಾಲುಕ್ಯರ ತತ್ತರಿಸುವ ಕೈಗಳಿಂದ ಜಾರಿ ದೃಢಮುಷ್ಟಿಯವರೂ, ಉದ್ಯಮಶೀಲರೂ. ಧೈರ್ಯಶಾಲಿಗಳೂ ಆದ ರಾಷ್ಟ್ರಕೂಟರ ಕೈ ಸೇರಿತು.[೨೨]

ರಾಷ್ಟ್ರಕೂಟ ಮನೆತನಕ್ಕೆ ಸಂಬಂಧಿಸಿದ ಅತ್ಯಂತ ಪ್ರಾಚೀನ ದಾಖಲೆಯು ಪರಿಸರದ ಮೇವುಂಡಿ ಗ್ರಾಮದಲ್ಲಿ ಶಾಸನರೂಪದಲ್ಲಿ ದೊರೆತಿದೆ. ಒಂದನೇ ಅಮೋಘವರ್ಷ (ಕ್ರಿ.ಶ.೮೧೪-೮೮೦)ನಿಗೆ ಸಂಬಂಧಿಸಿದ ಕ್ರಿ.ಶ.೮೬೫ರ ಮೇವುಂಡಿ ಶಾಸನ[೨೩]ವು ಪ್ರಥಮ ಲಿಖಿತ ದಾಖಲೆಯಾಗಿದೆ. ಇದು ಕೀಳ್ಗುಂಟೆ ಶಾಸನವಾಗಿದ್ದಲ್ಲದೇ, ಪ್ರಾಚೀನತೆಯನ್ನು ತಿಳಿಸುವಲ್ಲಿ ಮುಖ್ಯವಾಗಿದೆ. ಅಲ್ಲದೇ ಮೇವುಂಡಿಯು ಅವರ ರಾಜಧಾನಿ ಪಟ್ಟಣ[೨೪]ವಾಗಿದ್ದುದರ ಬಗ್ಗೆ ತಿಳಿಸುತ್ತದೆ. ಇದರಿಂದಾಗಿ

ರಾಷ್ಟ್ರಕೂಟರ ಲಿಖಿತ ಇತಿಹಾಸ ಒಂದನೇ ಅಮೋಘವರ್ಷನಿಂದಲೇ ಪ್ರಾರಂಭವಾಗುತ್ತದೆ. ಇದೇ ಸ್ಥಳದಲ್ಲಿ ದೊರೆತಿರುವ ಒಟ್ಟು ನಾಲ್ಕು ಶಾಸನಗಳು ರಾಷ್ಟ್ರಕೂಟರ ಆಳ್ವಿಕೆಯ ಬಗ್ಗೆ ಸ್ಪಷ್ಟ ಮಾಹಿತಿ ನೀಡುತ್ತವೆ.

ಕ್ರಿ.ಶ.೮೬೫ರ ಒಂದನೇ ಅಮೋಘವರ್ಷನ ಶಾಸನ ಮೇವುಂಡಿ[೧೯] ಗ್ರಾಮದಲ್ಲಿ ದೊರಕಿದೆ. ಈ ಶಾಸನದಲ್ಲಿ ಒಂದನೇ ಅಮೋಘವರ್ಷನನ್ನು ಮಹಾರಾಜಾಧಿರಾಜಾ ಪರಮೇಶ್ವರ ಭಟಾರಕರ ಪೃಥ್ವಿವೀರಾಜ್ಯಂಗೆಯ ಸ್ವಸ್ಥಿ ಪ್ರಚಣ್ಡಮಣ್ಡಲಾಗ್ರಬಣ್ಡೆ ತಾರಲಮಣ್ಡಲ ಪ್ರತಾಪ' ಎಂದು ವರ್ಣಿಸಿದೆ. ಕ್ರಿ.ಶ.೮೯೨ರ ಮೇವುಂಡಿಯ ಶಾಸನವು[೨೦] ಅಮೋಘವರ್ಷ ನೃಪತುಂಗನ ಮಗನಾದ ಎರಡನೇ ಕೃಷ್ಣನ ಆಳ್ವಿಕೆಗೆ ಸಂಬಂಧಿಸಿದ್ದಾಗಿದ್ದು ಕ್ರಿ.ಶ.೮೭೮ರಲ್ಲಿ ಇವನು ಅಧಿಕಾರರೂಢನಾಗಿ ಆಡಳಿತ ನಿರ್ವಹಿಸಿದ ಬಗ್ಗೆ ವಿವರಣೆ ನೀಡುತ್ತದೆ. ಎರಡನೇ ಕೃಷ್ಣನನ್ನು ಶ್ರೀಪೃಥ್ವಿವಲ್ಲಭ ಮಹಾರಾಜಾಧಿರಾಜಾ ಪರಮೇಶ್ವರ ಪರಮಭಟ್ಟಾರಕರ ರಾಜ್ಯ ಮತ್ತರೋತ್ತಾರಾಭಿವೃದ್ಧಿಗೆ ಸಲ್ಲುತ್ತಿರೆ, ಸ್ವಸ್ತಿ ಸಮುಧಿತ ಪಂಚ ಮಹಾಸಬ್ದ ಮಹಾಸಾಮನ್ತ ಯಾದವ ವಂಶೋದ್ಭವಾ ಪ್ರಚಣ್ಡದೋರ್ದಣ್ಡಳಾಗ್ರ ಬಣ್ಡೆ ತಾರಾಮತಿಮಣ್ಡಳಂ ಪ್ರತಾಪ ಸಂಪನ್ನೇರಿ ವಿಪ್ರಬಳಜಳ ಧಿಸಸಮಂತ್ಪನ್ನಂ ಶ್ರೀಕಾವ್ತಾಕಾನ್ತಂ ರಣ ಮುರ್ಖದವಳಂ ರಣಿಮೂರ್ಖ ಕೇಸರಿ ಕದನಾದಿತ್ಯಂ ಷಡ್ಗುಣೌಳಂಕಾರಂ[೨೧] ಎಂದು ವರ್ಣಿಸಿದೆ. ಈ ವರ್ಣನೆಯ ಜೊತೆಗೆ ಇವನ ಮಹಾಸಾಮಂತನ ಕುರಿತು ಕೆಲ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಆ ವಿಷಯವೇನೆಂದರೆ ಈ ಮಹಾಸಾಮಂತನು ಕೋಗಳಿ-೫೦೦, ಮತ್ತು ಮಾಸವಾಡಿ-೧೪೦ರ ರಾಜಧಾನಿ ಮೇಳವಿಡು (ಮೇವುಂಡಿ)ವಿನಲ್ಲಿ ಇಂದ್ರ ಸಮಾನವಾದ ದೇಗುಲವನ್ನು ಮಾಡಿಸಿ ಅಲ್ಲಿನ ೫೦೦ ಮಹಾಜನರ ಕೈಯಲ್ಲಿ ೧೫೦೦ ಮತ್ತರು ಭೂಮಿಯನ್ನು ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ. ಇಮ್ಮಡಿ ಕೃಷ್ಣನ ಕಾಲದ ಮತ್ತೊಂದು ಶಾಸನ[೨೨]ದ ಬಹುಭಾಗ ತ್ರುಟಿತವಾಗಿ ಮಹಾಸಾಮಂತ ಕುಪ್ಪದೇವರಸನು ಕುಪ್ಪೇಶ್ವರ ದೇವಾಲಯ ನಿರ್ಮಾಣ ಮಾಡಿಸಿ ದಾನಬಿಟ್ಟ ವಿಷಯವನ್ನು ತಿಳಿಸುತ್ತಾ ಮಲ್ಲಿಕಾರ್ಜುನ ಹಾಗೂ ರಾಮನಾಥ ದೇವಾಲಯವನ್ನು ಉಲ್ಲೇಖಿಸುತ್ತದೆ. ಹೀಗೆ ರಾಷ್ಟ್ರಕೂಟರ ಅರಸರ ಐತಿಹಾಸಿಕತೆಯನ್ನು ಗೊತ್ತುಪಡಿಸುವ ಈ ಶಾಸನಗಳು ಮಹತ್ವಪೂರ್ಣವಾಗಿವೆ. ಅಲ್ಲದೇ ರಾಷ್ಟ್ರಕೂಟರು ತಮ್ಮನ್ನು 'ಯಾದವ ವಂಶೋದ್ಭವಂ' ಎಂದು ಕರೆದುಕೊಂಡಿರುವುದು ಕ್ರಿ.ಶ.೮೯೨ರ ಶಾಸನ[೨೩]ದಿಂದ ತಿಳಿದುಬರುತ್ತದೆ.

## ಕಲ್ಯಾಣದ ಚಾಲುಕ್ಯರು

ರಾಷ್ಟ್ರಕೂಟರ ಸಾಮಂತರಾಗಿದ್ದು ಅವರನ್ನು ಸೋಲಿಸಿ ಕ್ರಿ.ಶ.೯೭೩ರಲ್ಲಿ ಕಲ್ಯಾಣ ಚಾಲುಕ್ಯ ರಾಜ್ಯವನ್ನು ಸ್ಥಾಪಿಸಿದ ಕೀರ್ತಿ ಎರಡನೆಯ ತೈಲಪನಿಗೆ ಸಲ್ಲುತ್ತದೆ. ಕ್ರಿ.ಶ. ೯೭೩-೧೧೮೯ರ ವರೆಗೆ ಕರ್ನಾಟಕವನ್ನಾಳಿದ ಪ್ರಮುಖ ಅರಸುಮನೆತನವದು. ಇಂದಿನ ಬೀದರ್ ಜಿಲ್ಲೆಯಲ್ಲಿರುವ ಬಸವಕಲ್ಯಾಣ ಪಟ್ಟಣವು ಚಾಲುಕ್ಯರ ರಾಜಧಾನಿಯಾಗಿದ್ದಿತು. ರಾಷ್ಟ್ರಕೂಟರ ಕಾಲದ ಸಾಂಸ್ಕೃತಿಕ ಪರಂಪರೆಯನ್ನೇ

ಇವರು ಮುಂದುವರೆಸಿಕೊಂಡು ಬಂದರು. ಇವರ ಆಳ್ವಿಕೆಯ ಕಾಲದ ಅನೇಕ ಶಾಸನಗಳು ಈ ಮುಂಡರಗಿ ಪರಿಸರದಲ್ಲಿ ಲಭ್ಯವಾಗಿವೆ.

ಕಲ್ಯಾಣ ಚಾಲುಕ್ಯರ ಆಡಳಿತಾವಧಿಯ ಹಲವಾರು ಶಾಸನಗಳು ಮಾಸವಾಡಿ-೧೪೦ರ ನಾಡಿನ ವಿವಿಧ ಕಡೆಗಳಲ್ಲಿ ಲಭ್ಯವಾಗಿವೆ. ಮಾಸವಾಡಿ ನಾಡು ಇಮ್ಮಡಿ ತೈಲಪ (ಕ್ರಿ.ಶ.೯೭೩-೯೯೭)ನ[೩೦] ಕಾಲದಿಂದ ಸೋಮೇಶ್ವರ (ಕ್ರಿ.ಶ.೧೧೪೪-೧೧೯೮)ನ[೩೧] ಕಾಲದವರೆಗೆ ಸುಮಾರು ಎರಡೂವರೆ ಶತಮಾನಗಳ ಕಾಲ ಕಲ್ಯಾಣ-ಚಾಲುಕ್ಯರು ಧರ್ಮಪುರ (ಡಂಬಳ)ವನ್ನು ಈ ನಾಡಿನ ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದರು ಎಂದು ಶಾಸನದಿಂದ ತಿಳಿದುಬರುತ್ತದೆ. ಈ ನಾಡಿನಲ್ಲಿ ದೊರೆತ ಕಲ್ಯಾಣ ಚಾಲುಕ್ಯರಿಗೆ ಸಂಬಂಧಿಸಿದ ಪ್ರಥಮ ದಾಖಲೆ ಐದನೆಯ ವಿಕ್ರಮಾದಿತ್ಯನ ಕ್ರಿ.ಶ.೧೦೧೦ರ ಆಲೂರು ಶಾಸನ[೩೨]. ಈ ಪ್ರದೇಶದಲ್ಲಿನ ಚಾಲುಕ್ಯರ ಇತಿಹಾಸ ಇವನಿಂದಲೇ ಪ್ರಾರಂಭವಾಗುತ್ತದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಎರಡನೆಯ ತೈಲಪ (ಕ್ರಿ.ಶ.೯೭೩-೯೯೭)ನ ಮಂತ್ರಿ ದಲ್ಲಪ, ದಲ್ಲಪನ ಹಿರಿಯ ಮಗ ನಾಗದೇವ, ನಾಗದೇವನ ಕುಲಪತ್ನಿ ಗುಣದಂಕಕಾರ್ಲೆ ಅತ್ತಿಮಬ್ಬೆ, ಈಕೆಯ ಮಗ ಪಡೆವಳ ತೈಲಪನು ಮಾಸವಾಡಿ-೧೪೦ ಆಳುವಾಗ ಈ ಹಿಂದೆ ತಾನು ಕಟ್ಟಿಸಿದ ೧೫೦೦ ಬಸದಿಗಳಿಗಿಂತ ಅಪೂರ್ವವಾದ ಬಸದಿಯನ್ನು ಲಕ್ಕುಂಡಿಯಲ್ಲಿ ಅತ್ತಿಮಬ್ಬೆ ನಿರ್ಮಿಸಿದಳೆಂಬ ಉಲ್ಲೇಖ ಲಕ್ಕುಂಡಿಶಾಸನ[೩೩] ತಿಳಿದುಬರುತ್ತದೆ. ಇದರಿಂದಾಗಿ ಈ ನಾಡು ಇಮ್ಮಡಿ ತೈಲಪನ ಆಳ್ವಿಕೆಗೆ ಒಳಪಟ್ಟಿತ್ತೆಂದು ಸ್ಪಷ್ಟವಾಗುತ್ತದೆ. ಅಲ್ಲದೆ ಇವನ ಮಹಾಸಾಮಂತನಾದ ಶೋಭನರಸನು ಈ ಮಾಸವಾಡಿ-೧೪೦ರ ನಾಡಿನಲ್ಲಿ ಆಳುತ್ತಿದ್ದ[೩೪] ಎಂದು ತಿಳಿದುಬರುತ್ತದೆ.

ಎರಡನೇ ತೈಲಪನ ಆಳ್ವಿಕೆಯ ನಂತರ ಅಧಿಕಾರಕ್ಕೆ ಬಂದವನು ಆತನ ಪುತ್ರ ಇರಿವಬೆಡಂಗ ಸತ್ಯಾಶ್ರಯ. ಈ ದೊರೆಯ ಆಳ್ವಿಕೆಯ ಕಾಲಕ್ಕೆ ಬೆಳ್ವೊಲ-೩೦೦, ಪುಲಿಗೆರೆ-೩೦೦, ಬನವಾಸಿ-೧೨,೦೦೦ದ ವರೆಗೂ ಸಾಮ್ರಾಜ್ಯ ವಿಸ್ತರಿಸಿತ್ತು. ಕ್ರಿ.ಶ.೧೦೦೭ರ ಲಕ್ಕುಂಡಿಯ ಜೈನ ಬಸದಿಯಲ್ಲಿ ದೊರಕಿರುವ ಶಾಸನಾಧಾರದ ಮೇರೆಗೆ,

ಶ್ರೀಮತ್ಪಡೆವಳ ತೈಲಪಯ್ಯಂ ಮಾಸವಾಡಿ[೩೫]

ನೂಱನಾಲ್ವತ್ತುಮಂ ಬೀಳವೃತ್ತಿನಾಳ್ತುತ್ತಮಿರೆ ||ವೃ||

ಈ ಶಾಸನ ತಿಳಿಸುವುದೇನೆಂದರೆ ಇರಿವ ಬೆಡಂಗ ಸತ್ಯಾಶ್ರಯನ ಅಧಿಕಾರಾವಧಿಯಲ್ಲಿ ಶ್ರೀಮತ್ಪಡೆವಳ್ಳ ತೈಲಪಯ್ಯ (ಅತ್ತಿ ಮಬ್ಬೆಯ ಮಗ ಅಣ್ಣಿದೇವ) ಬೀಳವೃತ್ತಿಯಿಂದ ಬೆಳ್ವೊಲ-೩೦೦ರ ವ್ಯಾಪ್ತಿಯಲ್ಲಿ ಬರುವ ಮಾಸವಾಡಿ-೧೪೦ನ್ನು ಆಳುತ್ತಿದ್ದನು. ಈ ಮಾಸವಾಡಿ-೧೪೦ರಲ್ಲಿ ಲಕ್ಕುಂಡಿಯನ್ನು ಕೇಂದ್ರವನ್ನಾಗಿಟ್ಟುಕೊಂಡು ಮಾಸವಾಡಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು ಎಂದು ಈ ಶಾಸನ ತಿಳಿಸುತ್ತದೆ.

ಕಲ್ಯಾಣ ಚಾಲುಕ್ಯರ ಐದನೆ ವಿಕ್ರಮಾದಿತ್ಯನ (ಕ್ರಿ.ಶ.೧೦೦೮-೧೦೧೫)ನ ಆಳ್ವಿಕೆಗೆ ಸಂಬಂಧಿಸಿದ ಶಾಸನ ಕ್ರಿ.ಶ. ೧೦೧೦ರ ಆಲೂರ ಶಾಸನ[೩೬]ವಾಗಿದೆ. ಸತ್ಯಾಶ್ರಯನಿಗೆ ಗಂಡು ಸಂತಾನವಿಲ್ಲದ್ದರಿಂದ ಅವನ ತಮ್ಮ ದಶವರ್ಮನ ಮಗನಾದ ಐದನೆಯ ವಿಕ್ರಮಾದಿತ್ಯ ಪಟ್ಟಕ್ಕೆ ಬಂದನು. ಕ್ರಿ.ಶ.೧೦೧೦ಶಾಸನ ಇವನ ಆಳ್ವಿಕೆಗೆ ಸಂಬಂಧಿಸಿದ್ದಾಗಿದ್ದು ಇದು ಸಿರಿವೂರದ ಅಮರಭಟ್ಟಾರಕರಿಗೆ ವೆಣ್ಣೆಯಭಟ್ಟರು ಆಲೂರುದಲ್ಲಿ ಭಟ್ಟಭೂದಾನವನ್ನು ಉಲ್ಲೇಖಿಸುತ್ತದೆ. ಇವನು ನೊಳಂಬವಾಡಿ ೩೨,೦೦೦, ಕೋಗಳಿ -೫೦೦, ಬಳ್ಳಿಕುಂದೆ-೩೦೦, ಕುಕನೂರು-೩೦ ಹಾಗೂ ಮಾಸವಾಡಿ-೧೪೦ರ ದೇಶದ ಐದು ನಗರಗಳ ಅಧಿಪತಿಯಾಗಿದ್ದನೆಂಬುದರ ಬಗ್ಗೆ ಶಾಸನಾಧಾರಗಳಿವೆ.[೩೭]

ಐದನೆಯ ವಿಕ್ರಮಾದಿತ್ಯನ ತಂಗಿಯೂ, ಇಮ್ಮಡಿ ಜಯಸಿಂಹನ ಅಕ್ಕಳೂ ಆಗಿದ್ದ ಅಕ್ಕಾದೇವಿ ಈ ಪರಿಸರದಲ್ಲಿ ಆಳ್ವಿಕೆ ಮಾಡಿದ್ದಳೆಂಬುದಕ್ಕೆ ಶಾಸನಾಧಾರಗಳಿವೆ. ಇವಳು ಕ್ರಿ.ಶ. ೧೦೫೦ರಲ್ಲಿ ತೊರಗಲೆ-೬೦, ಕಿಸುಕಾಡು-೭೦, ಬಾಗಡಗೆ-೭೦, ಹಾಗೂ ಮಾಸವಾಡಿ-೧೪೦ರ ಪ್ರದೇಶಗಳನ್ನು ಆಳುತ್ತಿದ್ದಳೆಂದು ಶಾಸನಗಳು ಉಲ್ಲೇಖಿಸುತ್ತವೆ.[೩೮] ಈಕೆಯೇ ಕ್ರಿ.ಶ.೧೦೫೦ರಲ್ಲಿ ಮುಂಡರಗಿ ತಾಲೂಕಿನ ಕೋರ್ಲಹಳ್ಳಿಯಲ್ಲಿ ತುಂಗಭದ್ರಾ ನದಿಗೆ ಸೇತುವೆ ಕಟ್ಟಿ ಅದರ ರಕ್ಷಣೆಯ ವೆಚ್ಚಕ್ಕೆ ಭೂದಾನ ಮಾಡಿದಳೆಂದು ಶಾಸನಗಳು ಉಲ್ಲೇಖಿಸುತ್ತವೆ.[೩೯]

ಕಲ್ಯಾಣ ಚಾಲುಕ್ಯರ ಒಂದನೇ ಸೋಮೇಶ್ವರ (ಕ್ರಿ.ಶ.೧೦೨೪)ನ ಬಗ್ಗೆ ತಿಳಿಸುವ ಶಾಸನವು ಈ ಪರಿಸರದ ಡಂಬಳದಲ್ಲಿ ದೊರೆತಿದೆ. ಇದು ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳಿಗೆ ಇರುವ "ಸಮಸ್ತ ಭೂವನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮ ಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಲುಕ್ಯಾಭರಣಂ ಶ್ರೀ ಶ್ರೀಮತ್ತ್ರೈಲೋಕ್ಯಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನದೂಚಂದ್ರಾರ್ಕತಾರಂಬರಂ ಸಲುತ್ತಮಿರೆ ಎನ್ನುವ ಸಕಲ ಬಿರುದುಗಳೊಂದಿಗೆ ವರ್ಣಿತಗೊಂಡಿದ್ದಾನೆ.

ಕಲ್ಯಾಣ ಚಾಲುಕ್ಯ ಅರಸ ಎರಡನೇ ಸೋಮೇಶ್ವರನ ನಂತರ ಆರನೇ ವಿಕ್ರಮಾದಿತ್ಯ (ಕ್ರಿ.ಶ.೧೦೭೬-೧೧೨೭)ನು ಕ್ರಿ.ಶ.೧೦೭೬ರಲ್ಲಿ ಅಧಿಕಾರಕ್ಕೆ ಬಂದನು. ಪರಿಸರದಲ್ಲಿ ಇವನಿಗೆ ಸಂಬಂಧಿಸಿದ ಅನೇಕ ಶಾಸನಗಳು ಕಂಡುಬಂದಿವೆ. ಅವುಗಳಲ್ಲಿ ಆಲೂರು[೪೦], ಡಂಬಳ[೪೧], ಚಿಕ್ಕವಕ್ಕವಡ್ಡಟ್ಟಿ[೪೨], ಕಕ್ಕೂರು[೪೩], ಶಿರೂರು[೪೪], ಡೋಣಿ[೪೫]ಗಳಲ್ಲಿ ದೊರೆಯುತ್ತವೆ. ಚಿಕ್ಕವಡ್ಡಟ್ಟಿಯ ಕ್ರಿ.ಶ.೧೧೨೭ರ ಶಾಸನ[೪೬] ಮಹಾಮಂಡಲೇಶ್ವರ ಕಕ್ಕರಸನು ಮಾಸವಾಡಿ ನಾಡಿನ ಚಿಕ್ಕವಡ್ಡಟ್ಟಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಉಪವಿಭಾಗಗಳಾದ ಸುರಕ-೧೨, ಅವಗವಾಡಿ-೧೨,ರ ಆಡಳಿತ ನಡೆಸುತ್ತಿದ್ದನು ಎಂದು ತಿಳಿಸುತ್ತದೆ. ಈತನ ಮಹಾಮಂಡಲೇಶ್ವರ ಪೆರ್ಮಭೂಪಾಲನು ಧರ್ಮಪೊಳದಲ್ಲಿ ಆಡಳಿತ ನಡೆಸುತ್ತಿದ್ದನು.[೪೭] ಹಾಗೆಯೇ ಆರನೇ ವಿಕ್ರಮಾದಿತ್ಯನ ಹಿರಿಯ ರಾಣಿಯಾದ ಲಕ್ಷ್ಮೀ ಮಹಾದೇವಿಯ 'ಪದಿನೆಂಟು ಅಗ್ರಹಾರಮುಮಂ ಧರ್ಮಪುರಮುಮಂ'

ಆಳುತ್ತಿದ್ದಳು,[೪೮] ಎಂಬ ವಿಷಯವು ಅವಳು ೧೮ ಅಗ್ರಹಾರಗಳ ಡಂಬಳ ಪ್ರದೇಶವನ್ನು ಆಳುತ್ತಿದ್ದಳು ಎಂಬುದಕ್ಕೆ ಸಾಕ್ಷಿಯಾಗಿದೆ.

ಮುಮ್ಮಡಿ ಸೋಮೇಶ್ವರನ ತರುವಾಯ ಅವನ ಹಿರಿಯ ಮಗನಾದ ಎರಡನೆಯ ಜಗದೇಕಮಲ್ಲನು ಅಧಿಕಾರಕ್ಕೆ ಬಂದನು. ಈತನಿಗೆ ಸಂಬಂಧಿಸಿದ ಶಾಸನಗಳು ಈ ಪರಿಸರದ ಬಿದರಹಳ್ಳಿ[೪೯] ಮತ್ತು ಬೂದಿಹಾಳ[೫೦]ಗಳಲ್ಲಿ ದೊರೆತಿವೆ. ಹಾಗೆಯೇ ಇವನು ಮಹಾಮಂಡಲೇಶ್ವರನಾದ ಕುಪ್ಪದೇವರಸನು ಮಾಸವಾಡಿ-೧೪೦ರ ನಾಡಿನ ಆಡಳಿತವನ್ನು ನಡೆಸುತ್ತಿದ್ದನೆಂದು ಕ್ರಿ.ಶ.೧೧೪೭ರ ಬೂದಿಹಾಳ ಶಾಸನದಿಂದ[೫೧] ತಿಳಿದುಬರುತ್ತದೆ.

ಕಲ್ಯಾಣ ಚಾಲುಕ್ಯ ಮನೆತನದ ಮತ್ತೊಬ್ಬ ಅರಸನಾದ ನಾಲ್ಕನೆಯ ಸೋಮೇಶ್ವರನು ಮೂರನೇ ತೈಲಪನ ನಂತರ ಉತ್ತರಾಧಿಕಾರಿಯಾದನು. ಈತನಿಗೆ ಸಂಬಂಧಿಸಿದ ಶಾಸನವೊಂದು ಡಂಬಳದಲ್ಲಿ ದೊರೆತಿದ್ದು[೫೨] ಇದು ಅವನ ಮಹಾಪ್ರಧಾನ ಸೇನಾಪತಿ ತೇಜಿಮಯ್ಯ ದಂಡನಾಯಕನಿಂದ ಧರ್ಮಪುರದ ಗೋಣ ಸಮುದ್ರಕ್ಕೆ ಭೂದಾನ ನೀಡಿದ ಬಗ್ಗೆ ವಿವರಿಸುತ್ತದೆ.

**ಕಲಚೂರಿಗಳು**

ಕಲ್ಯಾಣದ ಚಾಲುಕ್ಯರನ್ನು ಬದಿಗೊತ್ತಿ ಚಾಲುಕ್ಯ ಸಾಮ್ರಾಜ್ಯವನ್ನು ಸ್ವತಂತ್ರ ಸಾರ್ವಭೌಮರಾಗಿ ಕಲಚೂರಿಗಳು ಆಳಿದರು. ಪ್ರಾರಂಭದಲ್ಲಿ ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದ ಇವರ ಮನೆತನದ ಇತಿಹಾಸ ಬಹು ಪ್ರಾಚೀನವಾಗಿದೆ.

ಕಲಚೂರಿ ಮನೆತನದ ಅರಸನಾದ ಎರಡನೇ ಸಂಕಮನ ಕಾಲದ ಒಂದು ಶಾಸನವು ಡೋಣಿ[೫೩]ಯಲ್ಲಿ ಲಭ್ಯವಾಗಿದೆ. ಇದರಿಂದಾಗಿ ಮುಂಡರಗಿ ಪರಿಸರದಲ್ಲಿ ಕಲಚೂರಿಗಳ ಆಳ್ವಿಕೆ ಇತ್ತೆಂಬುದನ್ನು ಖಚಿತಪಡಿಸುತ್ತದೆ.

**ಸೇವುಣರು**

ಯಾದವ ವಂಶಜರು ಸಹ ಈ ಪರಿಸರದಲ್ಲಿ ಆಳ್ವಿಕೆ ಮಾಡಿದ್ದಾರೆ. ಅದಕ್ಕೆ ಪುರಾವೆಯಾಗಿ ಡೋಣಿ[೫೪] ಮತ್ತು ಮೇವುಂಡಿ[೫೫]ಯಲ್ಲಿ ಲಭ್ಯವಾದಂತ ಶಾಸನಗಳು ಇವರ ಆಳ್ವಿಕೆಯನ್ನು ಸ್ಪಷ್ಟಪಡಿಸುತ್ತವೆ. ಇಲ್ಲಿನ ಎರಡು ಶಾಸನಗಳು ಯಾದವ ಅರಸನಾದ ಎರಡನೇ ಸಿಂಘನನ ನಂತರ ಅಧಿಕಾರಕ್ಕೆ ಬಂದ ಅರಸ ರಾಮಚಂದ್ರನೆಂದು ಅವನ ಆಳ್ವಿಕೆಯನ್ನು ಡಂಬಳ[೫೬] ಮತ್ತು ಶಿರೂರಿನಲ್ಲಿ[೫೭] ದೊರೆತ ಎರಡು ಶಾಸನಗಳಿಂದ ತಿಳಿಯಬಹುದು. ಕನ್ನಡ ಮೂಲದ ಈ ಮನೆತನದ ಒಂದು ಕಿರುಶಾಖೆ ಮಾಸವಾಡಿ-೧೪೦ರ ನಾಡಿನಲ್ಲಿ ೯ನೇ ಶತಮಾನದಿಂದ ೧೪ನೇ ಶತಮಾನದ ಆರಂಭದವರೆಗೂ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಹಾಗೂ ಹೊಯ್ಸಳರ ಮಾಂಡಲೀಕರಾಗಿ ಆಳ್ವಿಕೆ ಮಾಡಿದರು.[೫೮] ರಾಷ್ಟ್ರಕೂಟರ ಅರಸನಾದ ಎರಡನೇ ಕೃಷ್ಣನ ಆಡಳಿತಾವಧಿಯಲ್ಲಿ ಅವರ ಮಾಂಡಲೀಕರಾಗಿ

ರಾಮಚಂದ್ರಪ್ಪ ಕೋಗಳಿ-೫೦೦ ಮತ್ತು ಮಾಸವಾಡಿ-೧೪೦ರಲ್ಲಿ ಆಡಳಿತ ನಿರ್ವಹಿಸಿದನು.[೫೯] ಮೇವುಂಡಿ ಶಾಸನದಲ್ಲಿ ಇವನು ಕುಪ್ಪೇಶ್ವರ ದೇವಾಲಯಕ್ಕೆ ದಾನ ನೀಡಿದ ವಿವರಗಳಿವೆ.[೬೦]

**ಹೊಯ್ಸಳರು**

ಮುಂಡರಗಿ ಪರಿಸರದ ಮೇವುಂಡಿ[೬೧]ಯಲ್ಲಿ ದೊರೆತ ಎರಡನೆಯ ಬಲ್ಲಾಳ (ಕ್ರಿ.ಶ.೧೧೭೦-೧೨೨೦)ನ ಆಳ್ವಿಕೆಯ ಕಾಲದ ಒಂದು ಶಾಸನವು ಬಿಲ್ಲೇಶ್ವರ ದೇವರಿಗೆ ನೀಡಿರುವ ದಾನವನ್ನು ಕುರಿತು ಉಲ್ಲೇಖಿಸುತ್ತದೆ. ಏಕಮಾತ್ರ ಹೊಯ್ಸಳ ಕಾಲದ ಶಾಸನವು ಆಡಳಿತ ಹಾಗೂ ರಾಜಕೀಯ ವ್ಯವಸ್ಥೆಗೆ ಸಂಬಂಧಿಸಿದಂತೆ ವಿವರ ನೀಡುವುದಿಲ್ಲ.

**ವಿಜಯನಗರ**

ಪರಿಸರದ ಬ್ಯಾಗಿನಕೇರಿ ಗ್ರಾಮದ ಕೆರೆಯ ತುಂಬಿನ ಹತ್ತಿರವಿರುವ ಶಾಸನದಲ್ಲಿ ಚಿಕ್ಕಣ್ಣ ಉಪಾದ್ಯಾಯನ ಮಗ ಗೋಪಣ್ಣ ಮೂವತ್ತು ಪ್ರತಾಪಗಳನ್ನು ವ್ಯಯಿಸಿ ಕೆರೆಗೆ ತೂಬನ್ನು ನಿರ್ಮಿಸಿದನೆಂಬ ಉಲ್ಲೇಖವಿರುವುದು[೬೨] ಈ ಶಾಸನದಲ್ಲಿ ಉಲ್ಲೇಖವಾಗಿರುವ ಗೋಪಣ್ಣ ಎಂಬುವವನು ವಿಜಯನಗರ ಅರಸನಾದ ಇಮ್ಮಡಿ ಹರಿಹರನ ಅಧಿಕಾರಿಯಾಗಿದ್ದಿರಬಹುದು. ಏಕೆಂದರೆ ಮೊದಲನೆ ಬುಕ್ಕರಾಯ ಅಧಿಕಾರದಲ್ಲಿದ್ದಾಗ ಇವನ ಮಗನಾದ ಕಂಪಣ್ಣನು ಮಧುರೆಗೆ ಮುತ್ತಿಗೆ ಹಾಕಿದಾಗ ಸಾಳುವ ಮಂಗೂ, ಮಂತ್ರಿಯಾದ ಗೋಪಣ್ಣ ಅವನಿಗೆ ನೆರವಾಗಿದ್ದನು ಮತ್ತು ಗೋಪಣ್ಣ ಇಮ್ಮಡಿ ಹರಿಹರನ ಅವಧಿಯಲ್ಲಿ ಮಂತ್ರಿಯಾಗಿದ್ದಿರಬಹುದು. ಆದ್ದರಿಂದ ಕ್ರಿ.ಶ.೧೩೭೯ರ ತಾಮ್ರಪಟ ಶಾಸನವೊಂದರ ಪ್ರಕಾರ ಡಂಬಳ ಹಾಗೂ ಇತರ ೬೬ ಗ್ರಾಮಗಳು ವಿಜಯನಗರದ ೨ನೆಯ ಹರಿಹರನ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿದುಬರುತ್ತದೆ.[೬೩]

ಹೀಗೆ ಮುಂಡರಗಿ ಪರಿಸರವು, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚೂರಿಗಳ, ಯಾದವ (ಸೇವಣ)ರ ಮತ್ತು ಹೊಯ್ಸಳರ ರಾಜಕೀಯ ಕಾರ್ಯಕ್ಷೇತ್ರವಾಗಿ ಹೆಸರುವಾಸಿಯಾಗಿದೆ. ರಾಷ್ಟ್ರಕೂಟರಿಗೆ ಸಂಬಂಧಿಸಿದ ಅನೇಕ ಶಾಸನಗಳು ಈ ಪರಿಸರದಲ್ಲಿ ಲಭ್ಯವಾಗಿದ್ದು ಅವುಗಳಲ್ಲಿ ಕ್ರಿ.ಶ.೮೬೫ರ ಮೇವುಂಡಿಯ ಶಾಸನವೇ ಪ್ರಥಮ ಲಿಖಿತ ದಾಖಲೆಯಾಗಿದೆ. ಇದೇ ರೀತಿ ಇನ್ನೂ ಅನೇಕ ಶಾಸನಗಳು ಲಭ್ಯವಾಗಿದ್ದು ಅವುಗಳ ಮಾಹಿತಿಯಿಂದ ಹಲವು ಚಾರಿತ್ರಿಕ ಸಂಗತಿಗಳು ತಿಳಿದುಬಂದಿವೆ. ಹಾಗೆಯೇ ಕಲ್ಯಾಣ ಚಾಲುಕ್ಯರ ಈ ಪರಿಸರದ ಮುಖ್ಯ ಆಡಳಿತ ವಿಭಾಗವಾದ ಮಾಸವಾಡಿ-೧೪೦ನ್ನು ಆಡಳಿತದ ಭಾಗವನ್ನಾಗಿಸಿಕೊಂಡು ಆಳ್ವಿಕೆ ಮಾಡಿದ್ದನ್ನು ಶಾಸನಾಧಾರಗಳಿಂದ ತಿಳಿಯಬಹುದಾಗಿದೆ. ಕಾಲಾನಂತರ ಕಲಚೂರಿಗಳು, ಸೇವುಣರು, ಹೊಯ್ಸಳರು ಹಾಗೂ ವಿಜಯನಗರ ಅರಸರು ಆಳ್ವಿಕೆ ಮಾಡಿದ್ದಾರೆ. ಹೀಗಾಗಿ ಮುಂಡರಗಿಯು ಐತಿಹಾಸಿಕ ಪ್ರಾಮುಖ್ಯತೆಯನ್ನು ಹೊಂದಿರುವ ಪ್ರಾಚೀನ ಪರಿಸರವಾಗಿದೆ.

## ೨.೩. ಆಡಳಿತ ವಿಭಾಗಗಳು

ಮುಂಡರಗಿ ಪರಿಸರದ ರಾಜಕೀಯ ಇತಿಹಾಸವನ್ನು ಸೂಕ್ಷ್ಮವಾಗಿ ಅಧ್ಯಯನಕ್ಕೊಳಪಡಿಸಿದಾಗ ಇದು ಪ್ರಾಚೀನ ಕಾಲದಿಂದಲೂ ರಾಜಕೀಯವಾಗಿ ಮಹತ್ವದ ಪ್ರದೇಶವಾಗಿತ್ತೆಂದು ತಿಳಿದುಬರುತ್ತದೆ. ಕರ್ನಾಟಕದ ಇತಿಹಾಸಕ್ಕೆ ತಿರುವು ನೀಡಿದಂತ ರಾಜಕೀಯ ಮನೆತನಗಳು ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಕುರುಹುಗಳಿವೆ. ಅಂತಹ ರಾಜಮನೆತನಗಳನ್ನು ಹೆಸರಿಸುವುದಾದರೆ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಸೇವುಣರು (ಯಾದವರು) ಹೊಯ್ಸಳರು, ಸಾಮಂತ ಅರಸರು ಬಹುಮುಖ್ಯವಾದವು. ಕನ್ನಡ ನಾಡನ್ನಾಳಿದ ಪ್ರಮುಖ ಅರಸುಮನೆತನಗಳು ಹಾಗೂ ಅವರ ಅಧೀನ ಆಡಳಿತಾಗರರು ಮುಂಡರಗಿ ಪರಿಸರದ ಆಳ್ವಿಕೆಯನ್ನು ನಿರ್ವಹಿಸಿದ್ದಾರೆ. ಈ ಅಂಶಗಳ ಹಿನ್ನೆಲೆಯಲ್ಲಿ ಈ ಪರಿಸರವು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟ ಮಹತ್ವದ ರಾಜ್ಯಾಡಳಿತದ ಭೂ ಪ್ರದೇಶವೆನಿಸಿದೆ.

ವಿಸ್ತಾರವಾದ ಸಾಮ್ರಾಜ್ಯವನ್ನು ಒಬ್ಬ ವ್ಯಕ್ತಿಯಿಂದ/ಅರಸನಿಂದ ಆಳ್ವಿಕೆ ಮಾಡಲು ಸಾಧ್ಯವಿಲ್ಲ. ಸಾಧ್ಯವಾದರೂ ಅದು ಬಹು ಪ್ರಯಾಸದ ಕಾರ್ಯವಾಗುವುದು. ಹಾಗಾಗಿ ಪ್ರಾಚೀನ ಕಾಲದಿಂದಲೂ ಆಡಳಿತದ ಅನುಕೂಲಕ್ಕಾಗಿ ರಾಜರು ತಮ್ಮ ಸಾಮ್ರಾಜ್ಯವನ್ನು ವಿಭಾಗ, ಉಪ ವಿಭಾಗಗಳಲ್ಲಿ ವಿಂಗಡಿಸುತ್ತಿದ್ದ ಪದ್ಧತಿ ರೂಢಿಯಲ್ಲಿರುವುದು ಕಂಡುಬರುತ್ತದೆ. ಆಧುನಿಕ ಕಾಲದಲ್ಲಿಯ ವಿಭಾಗಗಳನ್ನಾಗಿ ಮಾಡಿಕೊಂಡು ಅಧಿಕಾರಿಗಳನ್ನ ನೇಮಕ ಮಾಡುವ ಪದ್ಧತಿಯನ್ನು ಕಾಣುತ್ತೇವೆ.

ರಾಜನು ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ವಿಭಾಗ-ಉಪವಿಭಾಗಗಳನ್ನಾಗಿ ವಿಂಗಡಿಸಿ ಅವುಗಳಿಗೆ ವಿಶ್ವಾಸಿ ಅಧಿಕಾರಿಗಳನ್ನು ನೇಮಿಸುತ್ತಿದ್ದನು. ಈ ಪದ್ಧತಿ ಬಹಳ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ. ಇಂಥ ವಿಭಾಗಗಳನ್ನು ಆಹಾರ-ಮಂಡಲ-ಭುಕ್ತಿ-ವಿಷಯ-ದೇಶ-ನಾಡು-ಕಂಪಣ ಎಂಬ ಹೆಸರುಗಳನ್ನು ಬಳಸಲಾಗಿದೆ.[೬೪] ಪ್ರಾಚೀನ ಕಾಲದಲ್ಲಿ ಇಡೀ ವ್ಯವಸ್ಥೆಗೆ ರಾಜನೇ ಅಧಿಪತಿ. ಎಲ್ಲವೂ ಆತನ ಆಳ್ವಿಕೆಗೆ ಒಳಪಟ್ಟಿತ್ತು. ಆಡಳಿತದ ನಿರ್ವಹಣೆಗಾಗಿ ಒಂದೊಂದು ಗ್ರಾಮಕ್ಕೂ ಅಧಿಕಾರಿಗಳನ್ನು ನೇಮಿಸುತ್ತಿದ್ದನು. ಪ್ರಭುಗಳು ವಾಸ್ತವವಾಗಿ ಆಳುವವರು. ಅವರುಗಳೆಂದರೆ ಚಕ್ರವರ್ತಿಗಳು, ಮಹಾಮಂಡಲೇಶ್ವರರು, ಮಹಾಸಾಮಂತರು, ಪ್ರಭುಗಾವುಂಡರು ಮತ್ತು ಗಾವುಂಡರಾಗಿದ್ದಾರೆ. ಈ ಐದು ಪ್ರಭು ವಿಭಾಗದವರು ವ್ಯಾಪ್ತಿಗೆ ಒಳಪಟ್ಟ ನಾಡಿನ ವಿಭಾಗದ ಒಡೆಯರಾಗಿದ್ದಾರೆ. ಚಕ್ರವರ್ತಿಗೆ ಅಧೀನರಾಗಿ ಮಹಾಸಾಮಂತರು, ಮಹಾಸಾಮಂತರಿಗೆ ಪ್ರಭುಗಾ ವುಂಡರು ಇಲ್ಲವೆ ನಾಡಪ್ರಭುಗಳು, ಈ ಪ್ರಭು ಗಾವುಂಡರಿಗೆ ಅಧೀನರಾಗಿ ಗಾವುಂಡರು ತಮ್ಮ ಗ್ರಾಮಗಳನ್ನು ಆಳುತ್ತಿದ್ದರು. ಸಾಮ್ರಾಜ್ಯವನ್ನು ವಿಭಾಗ, ಉಪವಿಭಾಗವನ್ನಾಗಿ ವಿಂಗಡಿಸಲಾಗುತ್ತಿತ್ತು. ದೊಡ್ಡ ದೊಡ್ಡ ವಿಭಾಗಗಳಿಗೆ ಚಕ್ರವರ್ತಿಯು ಸಾಮಾನ್ಯವಾಗಿ ರಾಜವಂಶದವರನ್ನು ಮಹಾಮಂಡಲೇಶ್ವರರು ಎಂದು ನೇಮಿಸುತ್ತಿದ್ದರು.

ಮಹಾಮಂಡಲೇಶ್ವರರು ತಮ್ಮ ರಾಜ್ಯದ ಸಣ್ಣ ವಿಭಾಗಗಳಿಗೆ ಮಹಾಸಾಮಂತರನ್ನು ಪ್ರಭುವಾಗಿ ನೇಮಿಸುತ್ತಿದ್ದರು. ಈ ಮಹಾಸಾಮಂತರ ಕೆಳಗೆ ಕೆಲವು ಗ್ರಾಮಗಳನ್ನು ಒಳಗೊಂಡ ಸಣ್ಣ ವಿಭಾಗಗಳ ಪ್ರಭುಗಾವುಂಡರು ಇರುತ್ತಿದ್ದರು. ಗ್ರಾಮದ ಪ್ರಭುಗಳಾಗಿ ಗಾವುಂಡರು ಆಳುತ್ತಿದ್ದರು.[೬೫]

ಕರ್ನಾಟಕದ ಇತಿಹಾಸದಲ್ಲಿ ಸಾಮ್ರಾಜ್ಯವನ್ನು ವ್ಯವಸ್ಥಿತವಾಗಿ ಅನೇಕ ಪ್ರಾಂತ, ಮಂಡಲ, ವಿಷಯ, ದೇಶ, ನಾಡು, ಕಂಪಣ ಎಂದು ಮುಂತಾದ ರೀತಿಯಲ್ಲಿ ವಿಂಗಡಿಸಿದ ಸಂಗತಿ ಶಾಸನಗಳಲ್ಲಿ ಉಕ್ತವಾಗಿದೆ. ಈ ರೀತಿಯ ವಿಭಾಗಗಳು ತಮ್ಮದೆಯಾದ ಪ್ರತ್ಯೇಕ ಹೆಸರುಗಳಿಂದ ಗುರುತಿಸಲ್ಪಡುತ್ತಿದ್ದವು. ಇಂತಹ ವಿಭಾಗಗಳಲ್ಲಿ ಕುಂತಳ ದೇಶವು ಒಂದಾಗಿದೆ. ಈ ಕುಂತಳ ದೇಶದಲ್ಲಿ ಹಲವಾರು ಆಡಳಿತದ ವಿಭಾಗಗಳಿದ್ದವು. ಅವುಗಳಲ್ಲಿ ಬನವಾಸಿ, ತರ್ದವಾಡಿ, ಕಿಸುಕಾಡು, ಬಾಗಡಗೆ, ಹಗರಮ್ಮೆಗೆ, ಬೆಳ್ವೊಲ, ಪುಲಿಗೆರೆ, ಕರಡಿಕಲ್ಲು, ಹಾನಗಲ್ಲು ಹಾಗೂ ಮಾಸವಾಡಿ ಮೊದಲಾದವುಗಳನ್ನು ಉದಾಹರಿಸಹಬಹುದಾಗಿದೆ. ಕೆಲವು ಆಡಳಿತದ ವಿಭಾಗಗಳು ಅರಸುಮನೆತನದಿಂದಲೂ ಕರೆಯಲ್ಪಡುತ್ತಿದ್ದವು. ಅವುಗಳಲ್ಲಿ ಗಂಗವಾಡಿ, ಸಿಂದವಾಡಿ, ಕದಂಬ ಮಂಡಲ, ಸೇವುಣದೇಶ ಮೊದಲಾದವುಗಳನ್ನು ಹೆಸರಿಸಬಹುದು.

ಸಾಮಾನ್ಯವಾಗಿ ಆಡಳಿತದ ವಿಭಾಗಗಳನ್ನು ಆಯಾ ವಿಭಾಗಗಳ ಮುಖ್ಯ ಸ್ಥಳಗಳ ಹೆಸರಿನಿಂದಲೂ ಕರೆಯುತ್ತಿದ್ದರು. ಬನವಾಸಿ ದೇಶ ಪುಂಗಟನಾಡು,[೬೬] ತದರ್ಕವಾಡಿ ನಾಡು ಮುಂತಾದವುಗಳನ್ನು ಹೆಸರಿಸಬಹುದು. ಹಾಗೆಯೇ ಆಡಳಿತ ವಿಭಾಗಗಳೊಂದಿಗೆ ಸಂಖ್ಯೆಗಳನ್ನು ಜೋಡಿಸಿ ಕರೆಯುವ ಪದ್ಧತಿ ಪ್ರಚಲಿತವಿತ್ತೆಂದು ತಿಳಿದುಬರುತ್ತದೆ. ಅವುಗಳಲ್ಲಿ ಗಂಗವಾಡಿ ತೊಂಬತ್ತಾರು ಸಾಸಿರ[೬೭], ಬನವಾಸಿ ಪನ್ನಿರ್ಚ್ಛಾಸಿರ[೬೮], ಕೂಹಂಡಿ ಮೂರುಸಾವಿರ[೬೯] ತರ್ದವಾಡಿ ಸಾಸಿರ[೭೦] ಬೆಳ್ವೊಲ ಮುನ್ನೂರು[೭೧] ಪುಲಿಗೆರೆ ಮುನ್ನೂರು[೭೨], ಕಿಸುಕಾಡು ಎಪ್ಪತ್ತು[೭೩], ಮಾಸವಾಡಿ ನೂರಾನಲ್ವತ್ತುಮಂ[೭೪] ಹೀಗೆ ಅನೇಕ ಉದಾಹರಣೆಗಳನ್ನು ಕೊಡಬಹುದು.

### ಮಾಸವಾಡಿ-೧೪೦ ಆಡಳಿತ ವಿಭಾಗ

ಇಂದಿನ ಮುಂಡರಗಿ ತಾಲೂಕಿನ ಮೇರೆ ಹಿಂದೆ ಹಾವೇರಿ ತಾಲೂಕಿನ ವರದಾ ನದಿಯ ಉತ್ತರದ ಪೂರ್ವಭಾಗ ಮತ್ತು ಗದಗ ತಾಲೂಕಿನ ಲಕ್ಕುಂಡಿಯನ್ನೊಳಗೊಂಡ ಪೂರ್ವಭಾಗವು ಮಾಸವಾಡಿ -೧೪೦ರಲ್ಲಿ ಅಂತರ್ಗತವಾಗಿದ್ದವು. ಈ ಕುರಿತು ಡಂಬಳದ ಶಾಸನವೊಂದು ತಿಳಿಯಪಡಿಸುತ್ತದೆ. ಈ ಶಾಸನಕಾಲ ೧೩ನೆಯ ಶತಮಾನ. It describes Masavadi-140 Nadu which is stated to have been situated on the onrthen bank of the river Dakhashina Ganga. That is Tungabhadra in Kuntala vishaya.

"ಶ್ರೀ ಕುಂತಳದ ವಿಷಯದ ದಕ್ಷಿಣಗಂಗಾ ನದಿಯೋತ್ತರ

ತೀರಂ ಬೀಡಿದೊಪ್ಪುತ್ತಿಪ್ಪ ಮಾಸವಾಡಿ ನಾಡದಂ..."

ಇನ್ನೊರ್ವ ಶಾಸನಕವಿ ಈ ಮಾಸವಾಡಿ-೧೪೦ರ ನಾಡನ್ನು ಬಹು ಸುಂದರವಾಗಿ ಬಣ್ಣಿಸಿದ್ದಾನೆ.

"ಶ್ರೀ ಮತ್ಕುಂತಳ ಭೂಮಿ ಕಾಮಿನಿಯ ವಕ್ತ್ರಾದರ್ಶಮಂ ಮೋತ್ತು

ಸದ್ಧಾಮಂ ಶೋಭೆಗೆ ಮಾಸವಾಡಿಯೆಸುಗಂ ನಾಡಿದಂತದಂ..."

ಇಂಥ ಮಣ್ಣಿನಲ್ಲಿ ಹುಟ್ಟಿ ಬೆಳೆದವರ ಬಗೆಗೆ ಈ ನಾಡಿನ ಬೆಳೆಗಳ ಬಗೆಗೂ ಶಾಸನಕವಿ ಮನಂಬುಗುವಂತೆ ಬಣ್ಣಿಸಿದ್ದಾನೆ.

"ಸತ್‌ಕುಲರ್ ಸಪುಣ್ಯ ಸ್ವರೂಪಿಗಳು ನರರೆಲ್ಲರಂ ಅಲ್ಲಿ...

ಪ್ರಿಯದಿಂ ಚಕ್ರಿಯ ಮೆಚ್ಚೆ ವಿಕ್ರಮದಿ ಪೆತ್ತಂ ರೂಢಿಯಂ

ಮಾಸವಾಡಿಯ..."

ಬೆಳೆಸಲ್ಲರಿಸಿನ ಮೆಣಸು ಸರಾಜಾ ನವಿಕ್ಷು ವೃಕ್ಷಮವೆಲ್ಲಂ

ಹಲಸೀಳೆ ಮಾಮರ"

ಇಂಥ ಮಾಸವಾಡಿ-೧೪೦ರ ನಾಡು ಭೌಗೋಳಿಕ ವಿಭಾಗವಾಗಿದ್ದು, ಅದರಲ್ಲಿ ೧೪೦ ಗ್ರಾಮಗಳು ಸಮಾವೇಶಗೊಂಡಿದ್ದುವಲ್ಲದೆ ಪುಲಿಗೆರೆಯ ಕೆಲ ಪ್ರದೇಶಗಳಿಂದ ಕೂಡಿಕೊಂಡಿದ್ದು, ಪೂರ್ವಕ್ಕೆ ಕೋಗಳಿ ತಾರಾ ಎಂಬ ನಾಡಿತ್ತೆಂಬುದನ್ನು ಶಾಸನವೊಂದು ದಾಖಲಿಸಿದೆ. (ಚಂದ್ರಶೇಖರ ವಸ್ತ್ರದ, ಅರ್ಜುನ್ ಗೊಳಸಂಗಿ: ಕೃತುಪುರ)

ಪ್ರಾಚೀನ ಕರ್ನಾಟಕ ಆಡಳಿತ ವಿಭಾಗಗಳಲ್ಲಿ ಮಾಸವಾಡಿ-೧೪೦ ಒಂದಾಗಿದೆ. ಇದು ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಎಲ್ಲಾ ಗ್ರಾಮಗಳನ್ನು ಒಳಗೊಂಡಿದ್ದು ಡಂಬಳ ಮತ್ತು ಮುಂಡರಗಿ ಎಂಬ ಎರಡು ಹೋಬಳಿ[೨೫]ಗಳನ್ನು ಹೊಂದಿದೆ. ಡಂಬಳವು ಈ ನಾಡಿನ ಪ್ರಮುಖ ಪಟ್ಟಣ ಮತ್ತು ರಾಜಧಾನಿ ಪ್ರದೇಶವಾಗಿದೆ.[೨೬]

ಶಾಸನಗಳಲ್ಲಿ ಈ ವಿಭಾಗವು ಮಾಸವಾಡಿ ನೂರಾನಲ್ವತ್ತರ[೨೭], ಮಾಸವಾಡಿ ನೂರಾನಲ್ವತ್ತು[೨೮], ಮಾಸವಾಡಿ ನಾಡು[೨೯], ಮಾಸವಾಡಿ[೩೦] ಎಂಬ ರೂಪಗಳಲ್ಲಿ ಕಾಣಿಸಿಕೊಂಡಿದೆ. ಇದರಿಂದಾಗಿ ಮಾಸವಾಡಿಯು 'ನಾಡು' ಆಗಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಮುಂಡರಗಿ ಪರಿಸರದಲ್ಲಿ ದೊರೆತಿರುವ ಅತೀ ಪ್ರಾಚೀನ ಶಾಸನವೆಂದರೆ ರಾಷ್ಟ್ರಕೂಟ ಅಮೋಘವರ್ಷನ (ಕ್ರಿ.ಶ.೮೧೪-೮೭೮) ಕಾಲಕ್ಕೆ ಸಂಬಂಧಿಸಿದ ಮೇವುಂಡಿ ಶಾಸನ[೩೧] ಇದರಲ್ಲಿ ಮಾಸವಾಡಿ-೧೪೦ ಆಡಳಿತ ವಿಭಾಗದ ಉಲ್ಲೇಖ ಕಂಡುಬರುವುದಿಲ್ಲ.

ಅಮೋಘವರ್ಷನ ನಂತರ ಆಡಳಿತ ನಡೆಸಿದ ಎರಡನೇ ಕೃಷ್ಣನ (ಕ್ರಿ.ಶ.೮೭೮-೯೧೪) ಕಾಲದ ಮೇವುಂಡಿ ಶಾಸನ[೩೨]ದಲ್ಲಿ ಮಾಸವಾಡಿಯ ಉಲ್ಲೇಖ ತಿಳಿದುಬರುತ್ತದೆ. ಇದರಿಂದಾಗಿ ಅಮೋಘವರ್ಷನ

ಕಾಲಕ್ಕೆ ಮಾಸವಾಡಿ ನಾಡು ಒಂದು ಆಡಳಿತ ವಿಭಾಗವಾಗಿ ಇನ್ನೂ ಮಾರ್ಪಾಟಾಗಿರಲಿಲ್ಲವೆಂದು ಸ್ಪಷ್ಟವಾಗುತ್ತದೆ.

ಮಾಸವಾಡಿ-೧೪೦ ಎಂಬ ಆಡಳಿತ ವಿಭಾಗದ ಹೆಸರಲ್ಲಿರುವ ಸಂಖ್ಯೆ ೧೪೦ ಎಂಬುದು ಆಡಳಿತ ವಿಭಾಗದಲ್ಲಿರುವ ಗ್ರಾಮಗಳ ಸಂಖ್ಯೆಯಾಗಿದೆ. ಈ ಹಳ್ಳಿಗಳ ಹೆಸರುಗಳನ್ನೂ ಗುರುತಿಸುವಲ್ಲಿ ಮುಂಡರಗಿ ತಾಲೂಕಿನ ಹಿರೇವಡ್ಡಟ್ಟಿಯ ಶಾಸನ ಬಹುಮುಖ್ಯವಾದ ಮಾಹಿತಿಯನ್ನು ಒದಗಿಸುತ್ತದೆ. ಈ ಉಲ್ಲೇಖದ ಪ್ರಕಾರ ತಿಳಿದುಬರುವ ಸಂಗತಿ ಏನೆಂದರೆ ಮಾಸವಾಡಿ ಪ್ರಾಂತದಲ್ಲಿರುವ ಹಳ್ಳಿಗಳಲ್ಲಿಯ ಭೂಮಿಯನ್ನು ಹಿರೇವಡ್ಡಟ್ಟಿಯ ಬಲ್ಲಾಳೇಶ್ವರ ಮತ್ತು ರೆಮ್ಮೇಶ್ವರ ದೇವರಿಗೆ ದತ್ತಿಯಾಗಿ ಬಿಟ್ಟಿರುವುದನ್ನು ತಿಳಿಸುತ್ತದೆ. ಇದರಲ್ಲಿ ಉಲ್ಲೇಖವಾಗುವ ಹಳ್ಳಿಗಳೆಂದರೆ ಕೊಪ್ಪಳ ಜಿಲ್ಲೆಯಲ್ಲಿರುವ ಸಿಂಧವಿಗೆ (ಸಿಂಧೋಗಿ), ನೆಲುವಿಗೆ (ನೆಲೋಗಿ), ತಿಗುರೆ (ತಿಗುರಿ), ನಿಡುಸವಗೆ (ನಿಡುಸೋಗಿ), ಗುಡ್ಡನಾಲೂರು (ಗೂಡ್ನಾನೂರು), ಕೂಡಲಿಗೆ (ಕೂಡ್ಲಿಗಿ), ಗೊಣ್ಣಬಾಳು (ಗೊಂಡಬಾಳು), ಕಾತರಿಕೆ (ಕಾತರಿಕಿ), ಕೋಳೂರು? ಹಲುಗೆರೆ (ಹಲಗೇರಿ), ಕೆಸುನೆಲಗಳು, ಹಾಗೆಯೇ ಮುಂಡರಗಿ ತಾಲೂಕಿನ ಆಲೂರು (ಪೇಠಾಲೂರು), ಸಿರಿವೂರ ಜಿಲ್ಲೆ (ಶಿರೂರ) ಮೇಳವೀಡು (ಮೇವುಂಡಿ), ಬರದೂರು? ಹಾರುವಗೆರೆ, (ಹಾರುಗೇರಿ) ಮೆಂಡರೆ (ಮುಂಡರಗಿ), ಬಾಲವಾಡಿ, (ಕಿಸುಕುಂಡಿ), ಸಿಂಗಟಾಲೂರ (ಸಿಂಗಟಾಲೂರ), ಕೊರಲಹಳ್ಳಿ (ಕೊರ್ಲಹಳ್ಳಿ), ಹೆಸರೂರು? ಹೊನ್ನ ಬರದೂರು, (ಬರದೂರು) ಮುಂತಾದವುಗಳು. ಶಿರಹಟ್ಟಿ ತಾಲೂಕಿನ ಅರಹಟ? ಅರಗಿಲವಾಡ ಕನಹಳ್ಳಿ, ಬೆಳವಿರೆ (ಬೆಳವಿಗೆ) ಯಲಬುರ್ಗ ತಾಲೂಕಿನ ಎಡೆಹಳ್ಳಿ (ಎಡಹಳ್ಳಿ) ಮತ್ತು ಗಂಗಾವತಿ ತಾಲೂಕಿನಲ್ಲಿರುವ ಹೊನ್ನೆಯರಹಳ್ಳಿ, ಆನೆಗುಂದಿಗಳಾಗಿವೆ. ಇದರಿಂದಾಗಿ ತುಂಗಭದ್ರೆಯ ಎಡದಂಡೆಯಲ್ಲಿರುವ ಮೇಲ್ಕಾಣಿಸಿದ ಊರುಗಳನ್ನು ಒಳಗೊಂಡಂತೆ ಮುಂಡರಗಿ, ಕೊಪ್ಪಳ, ಶಿರಹಟ್ಟಿ, ಗಂಗಾವತಿ, ಯಲಬುರ್ಗ ತಾಲೂಕುಗಳ ಭಾಗವೇ ಮಾಸವಾಡಿ-೧೪೦ ಆಗಿತ್ತೆಂದು ಅದರ ವಿಸ್ತಾರವನ್ನು ಖಚಿತವಾಗಿ ಗುರುತಿಸಬಹುದಾಗಿದೆ.[೮೩]

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿಯ ಶಾಸನ[೮೪]ದಲ್ಲಿ ಈ ವಿಭಾಗದ ಉಲ್ಲೇಖ ಬರುತ್ತದೆ. ಆದರೆ ಹೂವಿನ ಹಡಗಲಿ ಈ ವಿಭಾಗದಲ್ಲಿ ಇದ್ದಿಲ್ಲ. ಚಕ್ರವರ್ತಿ ವಿಕ್ರಮಾದಿತ್ಯನು ಹೂವಿನಹಡಗಲಿ ಗ್ರಾಮದಲ್ಲಿನ ದೇವರಿಗೆ ದಾನವಾಗಿ ಮಾಸವಾಡಿ-೧೪೦ರ ವಿಭಾಗದ ಒಂದು ಗ್ರಾಮವನ್ನು ಕೊಡುತ್ತಾನೆ. ಶಾಸನದಲ್ಲಿ "...ಮಾಸವಾಡಿ ನೂಱನಾಲ್ವತ್ತ ಒಳಯ(ಪ್ಪ) ಉಚ್ಚ್ಯಲಗೇರಿ" ಎಂದು ತಿಳಿದುಬರುತ್ತದೆ. ಮುಂಡರಗಿ ತಾಲೂಕಿನ ಆಲೂರು[೮೫] ಮಾಳದಾಲೂರು ಮಾಸವಾಡಿ-೧೪೦ರಲ್ಲಿದ್ದವು. ಇದರ ಉಪವಿಭಾಗಗಳೆಂದರೆ ಸುಱಕ ೧೨, ಅವಗವಾಡಿ-೧೨, ಇವು ಎರಡು ಮಾತ್ರ ಶಾಸನಗಳಲ್ಲಿ ಖಚಿತವಾಗಿವೆ.

ಸುರಕ-೧೨ ಮತ್ತು ಅವಗವಾಡಿ-೧೨ ಈ ಎರಡು ಚಿಕ್ಕ ವಿಭಾಗಗಳ ಉಲ್ಲೇಖ ಮುಂಡರಗಿ ತಾಲೂಕಿನ ಚಿಕ್ಕವಡ್ಡಟ್ಟಿ[೮೬] ಶಾಸನದಲ್ಲಿ "XXX......ಕಕ್ಕರಸರುಂ ಸುಱಕ ಪನ್ನೆರಡುಮಂ ಅವಗವಾಡಿ

ಹನ್ನೆರಡು XXX.....ಎಂದು ತಿಳಿದು ಬಂದಿದೆ. ಮಾಸವಾಡಿ-೧೪೦ ಆಡಳಿತ ವಿಭಾಗದ ಇತರ ಉಪವಿಭಾಗಗಳ ಉಲ್ಲೇಖ ತಿಳಿದುಬರುವುದಿಲ್ಲ.[೬]

ಮಾಸವಾಡಿ-೧೪೦ ನಾಡಿನ ಆಡಳಿತ ವಿಭಾಗಗಳ ಹಿನ್ನೆಲೆಯಲ್ಲಿ ಈ ನಾಡಿನ ಗಡಿಗಳನ್ನು ಗುರುತಿಸುವಲ್ಲಿ ವಿದ್ವಾಂಸರಾದ ಎಂ.ಎಂ.ಕಲಬುರ್ಗಿಯವರು ಪ್ರಯತ್ನಿಸಿದ್ದಾರೆ. ಅವರ ಪ್ರಕಾರ ಪುಲಿಗೆರೆ (ಲಕ್ಷ್ಮೇಶ್ವರ) ಮುನ್ನೂರು ಈ ಆಡಳಿತ ವಿಭಾಗದ ಗಡಿಯನ್ನು ತಿಳಿಸುತ್ತ ಪುಲಿಗೆರೆ ಮುನ್ನೂರರ ಉತ್ತರಕ್ಕೆ 'ಬೆಳ್ವೊಲ ಮುನ್ನೂರು', ಪಶ್ಚಿಮಕ್ಕೆ ಹಾನುಂಗಲ್ಲಮುನ್ನೂರ್, ದಕ್ಷಿಣಕ್ಕೆ 'ಬನವಾಸಿ ಪನ್ನಿರ್ಚ್ಛಾಸಿರ', ಪೂರ್ವಕ್ಕೆ ಮಾಸವಾಡಿ ನೂರನಲವತ್ತು ನಾಡುಗಳಿದ್ದವು[೭] ಎಂದು ಅಭಿಪ್ರಾಯಿಸುತ್ತಾರೊ. 'ಮಾಸವಾಡಿಯ ಬೆಳ್ವೊಲ ಮುನ್ನೂರು ಮತ್ತು ಬನವಾಸಿ ಪನ್ನಿರ್ಚ್ಛಾಸಿರ' ಇವುಗಳ ಮಧ್ಯದ ನಾಡಾಗುತ್ತದೆ. ಅಂದರೆ ಮಾಸವಾಡಿ ನಾಡಿನ ಪೂರ್ವ ಪಶ್ಚಿಮವಾಗಿ ಕೋಪಣನಗರ ಮತ್ತು ಪುಲಿಗೆರೆ ದಕ್ಷಿಣೋತ್ತರವಾಗಿ ಬನವಾಸಿ ಪನ್ನಿರ್ಚ್ಛಾಸಿರ (೧೨೦೦೦) ಮತ್ತು ಬೆಳ್ವೊಲ ಮುನ್ನೂರು (೩೦೦) ಈ ನಾಲ್ಕು ಆಡಳಿತ ವಿಭಾಗಗಳನ್ನು ತನ್ನ ಗಡಿಯಾಗಿ ಹೊಂದಿತ್ತು ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಮುಂಡರಗಿ ತಾಲೂಕಿನ ಡಂಬಳ ಗ್ರಾಮವು ಮಾಸವಾಡಿ-೧೪೦ ನಾಡಿಗೆ ಕಟ್ಟಿದ ಪಟ್ಟಮುಮಿಟ್ಟ ಬೊಟ್ಟು ಮಳವಟ್ಟ ಕಳಶಮುಮಿರ್ಪ್ಪಂತೆ ಧರ್ಮವೊಳಲ್[೮] ಎಂಬುದೇ ಜನಪದರ ಮಾತಿನ ಬದಲಾವಣೆಯಿಂದಾಗಿ ಡಂಬಳವಾಗಿದೆ ಎಂದು ತಿಳಿದುಬರುವದು.

**ಅಡಿಟಿಪ್ಪಣಿ**

೧. ಪಾಟೀಲ್ ಬಿ.ಎಸ್.(ಸಂ) ಕಪೋತಗಿರಿ, (ಲೇ) ಮಹಾಲಿಂಗ ಯಾಳಗಿ: ಮುಂಡರಗಿ ತಾಲೂಕ ಐತಿಹಾಸಿಕ ದರ್ಶನ, (ಸ್ಮರಣ ಸಂಚಿಕೆ) ಪುಟ.೨. ೨೦೦೦.

೨. ಅದೇ.. ಪುಟ.೪೨.

೩. ಸೂರ್ಯನಾಥ್ ಯು.ಕಾಮತ್: ಧಾರವಾಡ ಜಿಲ್ಲಾ ಗೆಜೆಟಿಯರ್- ಪುಟ.೨೭೨. ೧೯೯೫.

೪. ಅದೇ......ಪುಟ-೨೭೦.

೫. ಬಾಲಸುಬ್ರಮಣ್ಯ, ಸಿ.ಎಸ್.ವಾಸುದೇವನ್, ರಮೇಶ ನಾಯಕ: ಕರ್ನಾಟಕ ದೇವಾಲಯ ಕೋಶ: ಗದಗ ಜಿಲ್ಲೆ, ಪುಟ-೪. ೨೦೦೭.

೬. ಕರಿಭರಮನಗೌಡರ-ಮೃಡಗಿರಿ ಪ್ರಭೆ- (ಸ್ಮರಣ ಸಂಚಿಕೆ) ಪುಟ.೨೬, ೨೦೦೪.

೭. ಪಾಟೀಲ್ ಬಿ.ಎಸ್.(ಸಂ) ಕಪೋತಗಿರಿ, (ಲೇ) ಅರಸನಾಳ ಸಿಎಸ್.: ಮುಂಡರಗಿ ತಾಲೂಕಿನ ಪ್ರಾಕೃತಿಕ ದರ್ಶನ. (ಸ್ಮರಣ ಸಂಚಿಕೆ) ಪುಟ.೩೫. ೨೦೦೦.

೮. ಅದೇ.... ಪುಟ.೩೬

೯. ಬಾಲಸುಬ್ರಮಣ್ಯ, ಸಿ.ಎಸ್.ವಾಸುದೇವನ್, ರಮೇಶ ನಾಯಕ: ಪೂರ್ವೋಕ್ತ, ಪುಟ.೪.

೧೦. ಅದೇ...ಪುಟ.೪

೧೧. ಡಂಬಳ ಕೆರೆಯ ಮೇಲಿನ ಶಿಲಾನ್ಯಾಸದಲ್ಲಿಯ ವಿವರಣೆಯ ಪ್ರಕಾರ

೧೨. ಪಾಟೀಲ್ ಬಿ.ಎಸ್.(ಸಂ) ಕಪೋತಗಿರಿ, ಪೂರ್ವೋಕ್ತ... ಪುಟ.೩೯.

೧೩. ಕರಿಭರಮನಗೌಡರ..: ಪೂರ್ವೋಕ್ತ, ಪುಟ.೩೬.

೧೪. ಬಾಲಸುಬ್ರಮಣ್ಯ, ಸಿ.ಎಸ್.ವಾಸುದೇವನ್, ರಮೇಶ ನಾಯಕ: ಪೂರ್ವೋಕ್ತ... ಪುಟ.೩.

೧೫. ಚುರ್ಚಿಹಾಳಮಠ ಸಿ.ಎಂ.(ಸಂ.): ಮುಂಡರಗಿ ನಾಡು ಸ್ವಾತಂತ್ರ್ಯ ಸಂಗ್ರಾಮ, (ಲೇ.) ಮಹಾಲಿಂಗ ಯಾಳಗಿ ಮುಂಡರಗಿ ನಾಡು ದರ್ಶನ, ಪುಟ.೬.

೧೬. ಶಿವತಾರಕ್ ಕೆ.ಬಿ.: ಕರ್ನಾಟಕದ ಪುರಾತತ್ವ ನೆಲೆಗಳು, ಪುಟ.೧೪೭. ೧೯೯೯.

೧೭. ಕ್ಷೇತ್ರಕಾರ್ಯದಲ್ಲಿ ಲಭ್ಯವಾದ ಶಿಲಾಯುಧಗಳ ಆಧಾರದಿಂದ

೧೮. ಶಿವತಾರಕ್ ಕೆ.ಬಿ.: ಪೂರ್ವೋಕ್ತ... ಪುಟ.೧೫೯.

೧೯. ಬಾಲಸುಬ್ರಮಣ್ಯ, ಸಿ.ಎಸ್.ವಾಸುದೇವನ್, ರಮೇಶ ನಾಯಕ: ಪೂರ್ವೋಕ್ತ, ಪುಟ.೫.

೨೦. ಚುರ್ಚಿಹಾಳಮಠ ಸಿ.ಎಂ.(ಸಂ.): ಪೂರ್ವೋಕ್ತ... ಪುಟ.೫.

೨೧. ದೇವರಕೊಂಡಾರೆಡ್ಡಿ (ಸಂ.) ಕನ್ನಡ ವಿಶ್ವವಿದ್ಯಾಲಯ ಶಾಸನಸಂಪುಟ-೭ ಪುಟ-೩೫. ೨೦೦೩.

೨೨. ಷೇಕ್ ಅಲಿ (ಪ್ರ.ಸಂ.) ಸುರೇಂದ್ರನಾವ್ ಬಿ. (ಸಂ.ಸಂ.) : ಕರ್ನಾಟಕ ಚರಿತ್ರೆ (ಲೇ.) ಸುರೇಂದ್ರರಾವ್ ಬಿ. ರಾಷ್ಟ್ರಕೂಟರು: ರಾಜಕೀಯ ಚರಿತ್ರೆ (ಸಂ.೨) ಪುಟ-೩೫. ೧೯೯೭

೨೩. S.I.I. Vol-XI-i, ೧೧, ೮೬೫ ಮೇವುಂಡಿ ಮುಂಡರಗಿ (ತಾ) ಗದಗ (ಜಿಲ್ಲೆ)

೨೪. S.I.I. Vol-XI-i, ೨೨, ೮೯೭, ಮೇವುಂಡಿ ಮುಂಡರಗಿ (ತಾ) ಗದಗ (ಜಿಲ್ಲೆ)

೨೫. ಆ.ರಿ.ಸೌ.ಇ.ಎ. ೧೯೨೮, ನಂ.ಬಿ.ಕೆ.೬೦.

೨೬. S.I.I. Vol-XI-೨೨, ೮೯೭. ಮೇವುಂಡಿ ಮುಂಡರಗಿ (ತಾ) ಗದಗ (ಜಿಲ್ಲೆ)

೨೭. ಅದೇ....

೨೮. S.I.I. Vol-XI-i, ೩೦, ೧೨ನೇ ಶತಮಾನ, ಮೇವುಂಡಿ, (ತಾ) ಗದಗ (ಜಿಲ್ಲೆ)

೨೯. ಭಾರತದ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ ಕರ್ನಾಟಕ ಸರ್ಕಾರ, ಬೆಂಗಳೂರು- ಪುಟ-೬೬. ೧೯೯೫.

೩೦. ಆರ್.ಸಿ.ಹಿರೇಮಠ ಮತ್ತು ಕಲ್ಬುರ್ಗಿ ಎಂ.ಎಂ. (ಸಂ.) ಕನ್ನಡ ಶಾಸನ ಸಂಪದ ಧಾರವಾಡ-ಪುಟ-೧೨೬. ೧೯೯೮.

೩೧. S.I.I. Vol-XV-i, ೫೭, ೧೧೮೪, ಡಂಬಳ, (ತಾ) ಗದಗ (ಜಿಲ್ಲೆ)

೩೨. E.I. Vol-XVI, P-೨೭-೩೧, ೧೦೧೦. ಆಲೂರು (ತಾ) ಗದಗ (ಜಿಲ್ಲೆ)

೩೩. ಹಿರೇಮಠ ಆರ್.ಸಿ. ಮತ್ತು ಕಲಬುರ್ಗಿ ಎಂ.ಎಂ. (ಸಂ): ಪೂರ್ವೋಕ್ತ ಪುಟ-೧೨೯.

೩೪. I.A.Vol-೧೧, ೨೯೭

೩೫. S.I.I, Vol-Xi-i, ೫೨, B.K.No.೨೮ ಕ್ರಿ.ಶ.೧೦೦೭, ಲಕ್ಕುಂಡಿ ಗದಗ ತಾ.ಜಿ.

೩೬. E.I.Vol-XVI, P-೨೭-೩೧, ೧೦೧೦ ಆಲೂರು. (ತಾ) ಗದಗ (ಜಿಲ್ಲೆ)

೩೭. ಕರ್ನಾಟಕ ಪರಂಪರೆ-ಸಂ-೧, ಪುಟ-೩೨೬, ೧೯೭೦.

೩೮. S.I.I.Vol-Xi-i, ೮೬, ೧೦೫೦, ಕೋರ್ಲಹಳ್ಳಿ (ತಾ) ಗದಗ (ಜಿಲ್ಲೆ)

೩೯. ಅದೇ....

೪೦. S.I.I.Vol-Xi-ii, ೧೩೬, ೧೦೯೧, ಆಲೂರು, ಮುಂಡರಗಿ (ತಾ) ಗದಗ (ಜಿಲ್ಲೆ)

೪೧. S.I.I., Vol-Xi-ii, ೧೪೪, ೧೦೯೮ ಡಂಬಳ, (ತಾ) ಗದಗ (ಜಿಲ್ಲೆ)

೪೨. S.I.I., Vol-Xi-ii, ೧೭೮, ೧೧೨೭. ಚಿಕ್ಕವಡ್ಡಟ್ಟಿ, (ತಾ) ಗದಗ (ಜಿಲ್ಲೆ)

೪೩. S.I.I., Vol-Xi-ii, ೧೬೫, ೧೧೧೩, ಕಕ್ಕೂರು (ತಾ) ಗದಗ (ಜಿಲ್ಲೆ)

೪೪. S.I.I., Vol-Xi-ii, ೧೨ನೇ ಶತಮಾನ ಶಿರೂರು (ತಾ) ಗದಗ (ಜಿಲ್ಲೆ)

೪೫. S.I.I., Vol-Xi-ii, ೧೨೬, ೧೦೮೦ ಡೋಣಿ, (ತಾ) ಗದಗ (ಜಿಲ್ಲೆ)

೪೬. S.I.I., Vol-Xi-ii, ೧೭೮, ೧೧೨೭ ಚಿಕ್ಕವಡ್ಡಟ್ಟಿ (ತಾ) ಗದಗ (ಜಿಲ್ಲೆ)

೪೭. S.I.I., Vol-Xi-ii, ೧೪೪, ೧೦೯೮, ಡಂಬಳ, (ತಾ) ಗದಗ (ಜಿಲ್ಲೆ)

೪೮. S.I.I., Vol-Xi-ii, ೧೨೬, ೧೦೮೦ ಡೋಣಿ, (ತಾ) ಗದಗ (ಜಿಲ್ಲೆ)

೪೯. ಕಲಬುರ್ಗಿ ಎಂ.ಎಂ.: ಧಾರವಾಡ ಜಿಲ್ಲಾ ಶಾಸನ ಸೂಚಿ, ಧಾರವಾಡ ೧೯೭೪ ಪುಟ ೪೧

೫೦. S.I.I., Vol-XV, No-೩೩, ೧೧೪೭, ಬೂದಿಹಾಳ, (ತಾ) ಗದಗ (ಜಿಲ್ಲೆ)

೫೧. ಅದೇ....

೫೨. S.I.I., Vol-XV, ೫೭, ೧೧೮೪, ಡಂಬಳ (ತಾ) ಗದಗ (ಜಿಲ್ಲೆ)

೫೩. ಕಲಬುರ್ಗಿ ಎಂ.ಎಂ.: ಧಾಜಿಶಾಸೂ, ಪುಟ. ೧೯೭೫.

೫೪. S.I.I., Vol-XV, ೧೭೨, ೧೨೨೬. ಡೋಣಿ (ತಾ) ಗದಗ (ಜಿಲ್ಲೆ)

೫೫. S.I.I., Vol-XV, ೧೬೮, ೧೨೨೬ ಮೇವುಂಡಿ, (ತಾ) ಗದಗ (ಜಿಲ್ಲೆ)

೫೬. S.I.I., Vol-XV, ೨೦೦, ೧೨೮೩, ಡಂಬಳ, (ತಾ) ಗದಗ (ಜಿಲ್ಲೆ)

೫೭. S.I.I., Vol-XV, ೨೦೨, ೧೨೯, ಶಿರೂರು (ತಾ) ಗದಗ (ಜಿಲ್ಲೆ)

೫೮. S.I.I., Vol-Xi-i, ಕೃಷ್ಣ.ನ ಕಾರಭಾರಿ: ಮಾಸವಾಡಿ-೧೪೦: ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿ.ಹೆಚ್.ಡಿ. ಪ್ರಬಂಧ ಕ.ವಿ.ವಿ. ಧಾರವಾಡ, ಪುಟ.೪೯. ೨೦೦೭.

೫೯. ೨೨, ೪೯೭ ಮೇವುಂಡಿ (ತಾ) ಗದಗ (ಜಿಲ್ಲೆ)

೬೦. ಅದೇ....

೬೧. ಕಲಬುರ್ಗಿ ಎಂ.ಎಂ. ೧೯೯೫, ಧಾಜಶಾಸೂ, ಧಾರವಾಡ ಪುಟ ೪೧. ೧೯೯೫.

೬೨. ಪಾಟೀಲ್ ಬಿ.ಎಸ್.,: ಪೂರ್ವೋಕ್ತ. ಪುಟ.೩೦.

೬೩. S.I.I., Vol-೫, ೬೮೬, ಪುಟ.೪೨೭.

೬೪. ನಾಗಯ್ಯ ಜಿ.ಎಂ.: ಆರನೇ ವಿಕ್ರಮಾದಿತ್ಯನ ಶಾಸನಗಳು-ಒಂದು ಅಧ್ಯಯನ ಅಪ್ರಕಟಿತ ಪಿಎಚ್.ಡಿ. ಪ್ರಬಂಧ ಕ.ವಿ.ವಿ.ಧಾರವಾಡ-ಪುಟ-೮೭. ೧೯೮೨

೬೫. ಅದೇ........ಪುಟ.೭೮.

೬೬. ಶ್ರೀನಿವಾಸ ರಿತ್ತಿ: ಬೆಳ್ವೊಲ ಮುನ್ನೂರು, ಕರ್ನಾಟಕ ಭಾರತಿ, ಸಂಪುಟ-೧ ಪುಟ-೮೧.

೬೭. ಎಫಿಗ್ರಫಿಯಾ ಕರ್ನಾಟಕ: ಶಿವಮೊಗ್ಗ ೩೧, ೧೧೦೮. ಸಿದ್ದಾಪುರ ಶಿವಮೊಗ್ಗ ತಾ. ಮತ್ತು ಜಿಲ್ಲೆ.

೬೮. ಎ.ಕ.: ಚನ್ನಗಿರಿ ೬೧, ೧೧೨೫ ಚನ್ನಗಿರಿ (ತಾ) ಶಿವಮೊಗ್ಗ (ಜಿಲ್ಲೆ)

೬೯. ಪಾಟೀಲ್ ಎಲ್.ವಿ.: ಬೆಳ್ವೊಲ-೨೦೦, ಇತಿಹಾಸದರ್ಶನ ಸಂ.೧೧, ೧೯೯೭.

೭೦. S.I.I, Xi-೪೦, ೯೬೫, ನರಸಲಗಿ, ಬಾಗೇವಾಡಿ (ತಾ) ಬಿಜಾಪುರ (ಜಿಲ್ಲೆ)

೭೧. S.I.I, XVIII, ೮೬೬, ಚಿಂಚಲಿ, ಗದಗ (ತಾ) ಮತ್ತು (ಜಿಲ್ಲೆ)

೭೨. ಶ್ರೀನಿವಾಸ ರಿತ್ತಿ: ಪುಲಿಗೆರೆ ಮುನ್ನೂರು, ತಿರುಳ್ಗನ್ನಡನಾಡು. ಪುಲಿಗೆರೆ ಲಕ್ಷ್ಮೇಶ್ವರ. ೧೯೭೨ ಪುಟ-೩.

೭೩. S.I.I, Xi-i, ೧೦೧, ೧೦೬೮. ಆಲೂರು, ಮುಂಡರಗಿ (ತಾ) ಗದಗ (ಜಿಲ್ಲೆ)

೭೪. S.I.I, Xi-i, ೧೧೭, ೧೦೭೬, ನಿಡಗುಂದಿ, ರೋಣ (ತಾ) ಗದಗ (ಜಿಲ್ಲೆ)

೭೫. ಭಾರತದ ಗ್ಯಾಸೆಟಿಯರ್: ಧಾರವಾಡ ಜಿಲ್ಲೆ. ಕ.ಸ.ಬೆಂಗಳೂರು, ಪುಟ-೧೦. ೧೯೯೫.

೭೬. S.I.I, Xii-ii, ೧೭೫, ೧೧೨೪ ಡಿಸೆಂಬರ್, ಮುಂಡರಗಿ (ತಾ) ಗದಗ (ಜಿಲ್ಲೆ)

೭೭. S.I.I, Xi-i, ೩೦, ೧೨ನೇ ಶತಮಾನ ಮೇವುಂಡಿ, ಮುಂಡರಗಿ (ತಾ) ಗದಗ (ಜಿಲ್ಲೆ)

೭೮. S.I.I, Xi-ii, ೧೬೫, ೧೧೧೩, ಕಕ್ಕೂರ, ಮುಂಡರಗಿ (ತಾ) ಗದಗ (ಜಿಲ್ಲೆ)

೭೯. S.I.I, Xi-i, ೮೬, ೧೦೫೦ ಕೋರ್ಲಹಳ್ಳಿ, ಮುಂಡರಗಿ (ತಾ) ಗದಗ (ಜಿಲ್ಲೆ)

೮೦. S.I.I, Xi-i, ೭೫, ೧೦೪೨ ಶಿರೂರು, ಮುಂಡರಗಿ (ತಾ) ಗದಗ (ಜಿಲ್ಲೆ)

೮೧. S.I.I, Xi-ii, ೧೭೫, ೧೧೨೪ ಡಂಬಳ, ಮುಂಡರಗಿ (ತಾ) ಗದಗ (ಜಿಲ್ಲೆ)

೮೨. S.I.I, Xi-ii, ೧೩೬, ೧೦೯, ಆಲೂರು ಮುಂಡರಗಿ (ತಾ) ಗದಗ (ಜಿಲ್ಲೆ)

೮೩. S.I.I, Vol-Xi, ೧೧, ೮೬೫ ಮೇವುಂಡಿ ಮುಂಡರಗಿ (ತಾ) ಗದಗ (ಜಿಲ್ಲೆ)

೮೪. S.I.I, Vol-Xi, ೨೨, ೮೯೭ ಮೇವುಂಡಿ, ಮುಂಡರಗಿ (ತಾ) ಗದಗ (ಜಿಲ್ಲೆ)

೮೫. ಹನುಮಾಕ್ಷಿಗೋಗಿ, ಪಿ.ಕೆ.ರಾಠೋಡ: ಡಂಬಳ:ಸಾಂಸ್ಕೃತಿಕ ಅಧ್ಯಯನ, ಪು-೭.

೮೬. S.I.I, Vol-Xii, ೧೫೮, ೧೦೯೦ ಹೂವಿನಹಡಗಲಿ (ತಾ) ಬಳ್ಳಾರಿ (ಜಿಲ್ಲೆ)

೮೭. S.I.I, Vol-Xii, ೧೩೬, ೧೦೯, ಆಲೂರು ಮುಂಡರಗಿ (ತಾ) ಗದಗ (ಜಿಲ್ಲೆ)

೮೮. S.I.I, Vol-Xii, ೧೭೮, ೧೧೨೭. ಚಿಕ್ಕವಡ್ಡಟ್ಟಿ, ಮುಂಡರಗಿ (ತಾ) ಗದಗ (ಜಿಲ್ಲೆ)

೮೯. S.I.I, Vol-Xii, ೧೫೮, ೧೦೯೦ ಹೂವಿನಹಡಗಲಿ (ತಾ) ಬಳ್ಳಾರಿ (ಜಿಲ್ಲೆ)

# ಅಧ್ಯಾಯ ೩. ಪುರಾತತ್ವ ಆಕರಗಳು

೩.೧. ಪ್ರಾಚೀನ ನೆಲೆಗಳು

೩.೨. ದೇವಾಲಯಗಳು

೩.೩. ಶಿಲ್ಪಾವಶೇಷಗಳು

ಅಧ್ಯಾಯ ೩

# ಪುರಾತತ್ವ ಆಕರಗಳು

ಇತಿಹಾಸವೆಂಬ ಅಧ್ಯಯನದ ಶಿಸ್ತಿಗೆ ಆಧಾರಗಳೇ ಭದ್ರಬುನಾದಿ. ಮೂಲಾಧಾರಗಳಿಲ್ಲದ ಇತಿಹಾಸ ಇತಿಹಾಸವೆನಿಸದು. ಸಾಹಿತ್ಯ ಕೃತಿಗಳೇ ಆಗಿರಲಿ, ಐತಿಹಾಸಿಕ ಕಡತಗಳೇ ಆಗಿರಲಿ, ಶಾಸನ, ತಾಮ್ರಪಟಗಳೇ ಆಗಿರಲಿ, ಯಾವುದೇ ಕಾಲದ ಇತಿಹಾಸ ರಚನೆಯ ದೃಷ್ಠಿಯಿಂದ ಅವು ಅತ್ಯಮೂಲ್ಯ ಆಕರಗಳು, ಇವುಗಳ ಅಧ್ಯಯನವೇ ಇತಿಹಾಸವೆನಿಸುವದು.

ಪ್ರಸ್ತುತ ಅಧ್ಯಾಯದಲ್ಲಿ ವಿವಿಧ ಪ್ರಾಚೀನ ನೆಲೆಗಳು, ದೇವಾಲಯಗಳು ಹಾಗೂ ಶಿಲ್ಪಾವಶೇಷಗಳನ್ನು ಕುರಿತು ಚರ್ಚಿಸಲಾಗಿದೆ. ಅದಕ್ಕೂ ಪೂರ್ವದ ಅಧ್ಯಾಯಗಳಾದ ಭೌಗೋಳಿಕತೆ ಮತ್ತು ಪ್ರಾಚೀನತೆಯ ಭಾಗದಲ್ಲಿ ಸೇರಿಸಬೇಕಾಗಿದ್ದುದು ಅಧ್ಯಯನ ಕ್ರಮವಾಗಿದ್ದಿತು. ಆದರೆ ಈ ಅಧ್ಯಯನವು ಮುಖ್ಯವಾಗಿ ಪುರಾತತ್ವ ಮತ್ತು ಐತಿಹ್ಯ ಕೇಂದ್ರೀತವಾಗಿದೆ. ಹೀಗಾಗಿ ಪುರಾತತ್ವ ಆಕರಗಳನ್ನು ಮತ್ತು ಐತಿಹ್ಯಗಳನ್ನು ಸಮೀಕರಿಸಿದ ಅಧ್ಯಯನ ಕೈಗೊಳ್ಳುವ ಮೂಲೋದ್ದೇಶವನ್ನು ಪ್ರಸ್ತುತ ಅಧ್ಯಯನ ಹೊಂದಿದೆ. ಈ ಹಿನ್ನಲೆಯಲ್ಲಿ ಅಧ್ಯಾಯ ಮೂರರಲ್ಲಿ ಪುರಾತತ್ವ ಆಕರಗಳನ್ನು ಹಾಗೂ ಅಧ್ಯಾಯ ನಾಲ್ಕರಲ್ಲಿ ಐತಿಹ್ಯಗಳನ್ನು ಕ್ರಮಾನುಗತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಈ ಎರಡು ಅಧ್ಯಾಯಗಳಿಗೆ ಹೆಚ್ಚು ಮಹತ್ವ, ಪ್ರಾಧಾನ್ಯತೆ ನೀಡುವ ಹಿನ್ನಲೆಯ ಜೊತೆಗೆ ಅಧ್ಯಯನ ಚೌಕಟ್ಟು ಒಂದೇ ದಿಕ್ಕಿನಡಿ, ವ್ಯವಸ್ಥಿತತೆಯೆಡೆಗೆ ಸಾಗುವ ದಿಶೆಯಲ್ಲಿ ಈ ಮಾರ್ಗ ಅನುಸರಿಸಲಾಗಿದೆ.

ಇತಿಹಾಸ ರಚನಾಕಾರ್ಯ ಆಳಸಂಶೋಧನೆಯಿಂದ ನಡೆಯುವ ಕಾರ್ಯವಾಗಿದ್ದು ಈ ನಿಟ್ಟಿನಲ್ಲಿ ಇತಿಹಾಸಕಾರನಿಗೆ ಆಕರಗಳ ಅವಶ್ಯಕತೆ ಅತೀಮುಖ್ಯವಾಗಿದೆ. ಯಾವುದೇ ಪ್ರದೇಶದ. ಜನಸಮುದಾಯದ ಇತಿಹಾಸವನ್ನು ರಚಿಸಬೇಕಾದರೆ ತತ್ಸಂಬಂಧ ಸಮಕಾಲೀನ ಹಾಗೂ ಅನಂತರ ಕಾಲದ ಪ್ರತ್ಯಕ್ಷ ಹಾಗೂ ಪರೋಕ್ಷ ಆಕರಗಳು ಅವಶ್ಯವಾಗಿ ಬೇಕಾಗುವುದು. ಈ ಆಕರಗಳಲ್ಲಿದೆ ಇತಿಹಾಸವಿಲ್ಲ (No Source, No History), ಇತಿಹಾಸ ರಚನೆಗೆ ಅವು ಸಾಕ್ಷಿಯಾಗಿವೆ ಹೀಗಾಗಿ ಅವುಗಳಿಲ್ಲದಿದ್ದಲ್ಲಿ ಇತಿಹಾಸದ ರಚನೆ ಕಷ್ಟಸಾಧ್ಯವಾಗುತ್ತದೆ.

"ಅಧ್ಯಯನದ ಒಂದು ವಿಷಯವಾಗಿ ಇತಿಹಾಸವು ಹೆಚ್ಚು ಕಡಿಮೆ ಪೂರ್ಣವಾಗಿ ಮೂಲಾಧಾರಗಳ ಅಧೀನದಲ್ಲಿದೆ" ಎಂಬ ಹೇಳಿಕೆ ಸತ್ಯಕ್ಕೆ ದೂರವಾಗಿಲ್ಲ. ಇತಿಹಾಸಕಾರರೆಲ್ಲರೂ ಒಮ್ಮತದಿಂದ ಹೇಳುವುದೆಂದರೆ, "ನಾವು ನಮ್ಮ ಜ್ಞಾನ ಅಥವಾ ತಿಳುವಳಿಕೆಯನ್ನು ಇತಿಹಾಸದ ಮೂಲಾಧಾರಗಳಿಂದ

ಪಡೆಯುತ್ತೇವೆ" ಏಕೆಂದರೆ ಆಕರಗಳಿಲ್ಲದೆ ಇತಿಹಾಸವನ್ನು ರಚಿಸಲು ಸಾಧ್ಯವಾಗುವುದಿಲ್ಲ. ಮಾನವನ ಗತಕಾಲದ ಇತಿಹಾಸವನ್ನು ಆತನು ನಮಗೆ ಉಳಿಸಿರುವ ಕುರುಹುಗಳ (Traces) ಆಧಾರದ ಮೇಲೆ ಪುನರ್ರಚಿಸುತ್ತೇವೆ. ಸಂಪ್ರದಾಯಗಳು, ದಂತಕಥೆಗಳು, ಮೂಢನಂಬಿಕೆಗಳು, ನಾಣ್ಯಗಳು, ಶಾಸನಗಳು, ಸ್ಮಾರಕಗಳು ಮೊದಲಾದ ವಿವಿಧ ಕುರುಹುಗಳು ಸಮಾಜದಲ್ಲಿ ಜೀವಂತವಾಗಿರುತ್ತವೆ. ಈಗ ಲಭ್ಯವಿರುವ ಪುರಾವೆಗಳು ಗತಕಾಲದ ಗುರುತುಗಳು. ಪೂರ್ವಕಾಲದ ಇತಿಹಾಸ ನಮಗೆ ಅತ್ಯಗತ್ಯ. ಏಕೆಂದರೆ ಆ ವಿವರಣೆ ಇಲ್ಲದೆ ಈಗಿನ ಕಾಲದ ಇತಿಹಾಸ ಅಸ್ಪಷ್ಟವಾಗುತ್ತದೆ ಮತ್ತು ಭವಿಷತ್ ಕಾಲವು ಅರ್ಥಹೀನವಾಗುತ್ತದೆ. ಆದ್ದರಿಂದ ಇತಿಹಾಸದ ರಚನೆಗೆ ತೊಡಗುವ ಮುನ್ನ ಸಂಶೋಧಕರು ಈ ಗುರುತುಗಳ ಶೋಧನೆಯನ್ನು ಪೂರ್ಣಗೊಳಿಸಬೇಕು. ಈ ಕಾರಣಕ್ಕಾಗಿ ಇತಿಹಾಸವನ್ನು "ತುಂಡು ಪುರಾವೆಗಳ ಆಧಾರದ ಮೇಲೆ ಗತಕಾಲದ ಮಹತ್ವದ ವಿಷಯ ವಸ್ತುವನ್ನು ಶೋಧಿಸುವ ಪ್ರಯತ್ನ" ಎಂದು ಅರ್ಥೈಸಲಾಗಿದೆ.[೧]

ಇತಿಹಾಸಕಾರ ಅಥವಾ ಸಂಶೋಧಕ ತನ್ನ ಶೋಧನೆಯ ನಿರ್ವಹಣೆಯಲ್ಲಿ ಬಹುಬಗೆಯ ಆಕರಗಳನ್ನು ಆಧರಿಸಬೇಕಾಗುತ್ತದೆ. ಆ ಆಕರಗಳು ಚರಿತ್ರೆಯ ಪರಿಶೋಧನೆಗೆ ಅಧಿಕೃತವಾಗಿ ಸ್ಪಷ್ಟನೆಯನ್ನು, ಮಾಹಿತಿಯನ್ನು ಒದಗಿಸುತ್ತವೆ. ಚರಿತ್ರೆಯನ್ನು ಪರಿಶೋಧಿಸುವ ಆಧಾರಗಳು ಎರಡು ಬಗೆಯವು. ಮೊದಲನೆಯದು ಸಾಹಿತ್ಯಿಕ ಆಧಾರಗಳು ಅಥವಾ ಗ್ರಂಥಗಳು, ಎರಡನೆಯದು ಪುರಾತತ್ವ ಆಧಾರಗಳು ಅಥವಾ ಸಾಂಸ್ಕೃತಿಕ ವಸ್ತು ಅವಶೇಷಗಳಾಗಿವೆ. ಇತ್ತೀಚಿಗೆ ದಂತಕಥೆಗಳು, ಜನಪದ ಕಥನಗಳು ಹಾಗೂ ಪರಂಪರಾನುಗತ ಪುರಾಣಗಳಲ್ಲಿ ಕಂಡುಬರುವ ಐತಿಹಾಸಿಕ ಅಂಶಗಳು ಆಯಾಯ ಪ್ರದೇಶದ ಐತಿಹಾಸಿಕ ಅಂಶಗಳಿಂದ ಮಹತ್ವದ್ದಾಗಿರುತ್ತವೆ.

ಸಾಹಿತ್ಯಿಕ ಆಧಾರಗಳೆಂದರೆ ಮತ, ಧಾರ್ಮಿಕ, ಪುರಾಣ ಮೊದಲಾದ ಗ್ರಂಥಗಳು, ಕಲ್ಪನೆಯಾಧಾರಿತ ಸೃಜನಶೀಲ ಕಾವ್ಯಾದಿ ಕೃತಿಗಳು, ರಾಜವಂಶಗಳ ಅನುವಂಶಿಕ ಆಸ್ಥಾನ ಚರಿತ್ರೆಗಳು, ಆಡಳಿತ ಸಂಬಂಧಿ ದಾಖಲೆಗಳು ಮೊದಲಾದವು. ಇವುಗಳ ಅಧ್ಯಯನವನ್ನಾಧರಿಸಿ ಚರಿತ್ರೆಕಾರರು ಗತಕಾಲದ ಚರಿತ್ರೆಯನ್ನು ಪುನರ್ರಚಿಸುವ ಪ್ರಯತ್ನ ನಡೆಸುತ್ತಾರೆ. ಪುರಾತತ್ವ ಆಧಾರಗಳೆಂದರೆ ಗತಕಾಲದ ನಿವಾಸಸ್ಥಾನಗಳು, ದೇವಸ್ಥಾನಗಳು ಇತರೆ ಕಟ್ಟಡಗಳು, ಅಂದಿನ ಬಳಕೆಯ ಸಾಮಾಗ್ರಿಗಳಾದ ಆಯುಧಗಳು, ಅಲಂಕಾರಮಯವಾದ ವಸ್ತುಗಳು, ಕಸುಬಿಗೆ ಸಂಬಂಧಿಸಿದ ಪರಿಕರಗಳು ಮೊದಲಾದವುಗಳ ಅವಶೇಷಗಳು. ಇವುಗಳನ್ನು ಬಿಟ್ಟರೆ ಅತಿಮುಖ್ಯವಾದ ಇತರ ಆಕರಗಳೆಂದರೆ ಶಾಸನಗಳು ಹಾಗೂ ಅಚ್ಚುಹಾಕಿಸಿದ ನಾಣ್ಯಗಳು ಮೊದಲಾದವುಗಳನ್ನು ಪುರಾತತ್ವದ ಆಧಾರಗಳೆಂದು ಪರಿಗಣಿಸಬಹುದು.

ಲಿಖಿತ ಆಧಾರಗಳು ಇಲ್ಲದಿದ್ದಾಗಲೂ ಪ್ರಾಚ್ಯವಸ್ತು ಅವಶೇಷಗಳು ಗತಕಾಲದ ಮಾನವನ ಸಂಸ್ಕೃತಿಯನ್ನು ಅರಿತುಕೊಳ್ಳಲು ಹೇಗೆ ನೆರವಾಗುತ್ತವೆ ಎಂಬುದಕ್ಕೆ ಹರಪ್ಪಾ ಸಂಸ್ಕೃತಿಯು (ಸಿಂಧೂ

ಕಣಿವೆಯ ಸಂಸ್ಕೃತಿ) ಒಂದು ಒಳ್ಳೆಯ ಉದಾಹರಣೆ. ಹರಪ್ಪಾ, ಮೆಹೆಂಜೋದಾರೋ, ಚಾನ್ಹುದಾರೋ, ಕಾಲಿಭಂಗನ್, ಲೋಥಲ್ ಮುಂತಾದ ಹಲವಾರು ನೆಲೆಗಳಲ್ಲಿ ಹರಪ್ಪಾ ಸಂಸ್ಕೃತಿಯ ಅವಶೇಷಗಳು ಕಂಡುಬಂದಿವೆ. ಉತ್ಖನನದಿಂದ ಕೋಟೆ ಕಟ್ಟಡಗಳು, ಬೀದಿಗಳು, ಆಯುಧೋಪಕರಣಗಳು, ತಾಮ್ರದ ಮತ್ತು ಮಡಿಕೆಯ ಪಾತ್ರೆಗಳು, ಮಣ್ಣಿನ ಗೊಂಬೆಗಳು, ಲಿಪಿಯುಳ್ಳ ಮುದ್ರೆಗಳು ಮುಂತಾದ ಅನೇಕ ಸಾಂಸ್ಕೃತಿಕ ವಸ್ತು ಅವಶೇಷಗಳು ಬೆಳಕಿಗೆ ಬಂದವು.[೨] ಹೀಗಾಗಿ ಈ ರೀತಿಯ ಆಕರಗಳು ಇತಿಹಾಸದ ಪುನರ‍್ರಚನೆಯ ಪುರಾತತ್ವೀಯ ಅಧ್ಯಯನದಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತವೆ.

ಅಧ್ಯಯನ ಕ್ಷೇತ್ರವಾದ ಮುಂಡರಗಿ ಪರಿಸರದಲ್ಲಿಯು ಇಂತಹ ಅನೇಕ ಮಹತ್ವಪೂರ್ಣ ಪುರಾತತ್ವ ಆಕರಗಳು ಲಭ್ಯವಾಗಿವೆ. ಅವುಗಳಲ್ಲಿ ಪ್ರಧಾನವಾಗಿ ಪ್ರಾಚೀನ ನೆಲೆಗಳು, ದೇವಾಲಯಗಳು, ಶಿಲ್ಪಾವಶೇಷಗಳು, ಶಾಸನಗಳು ಬಹು ಮುಖ್ಯವಾದವುಗಳಾಗಿವೆ. ಅಂತಹ ಐತಿಹಾಸಿಕ ಮಹತ್ವ ಪಡೆದ ಪ್ರಮುಖ ಸ್ಥಳಗಳಲ್ಲಿ ಡಂಬಳ, ಮೇವುಂಡಿ, ಬಿದರಳ್ಳಿ, ಕಕ್ಕೂರು, ಕೊರ್ಲಹಳ್ಳಿ, ಶೀರನಹಳ್ಳಿ, ಕಲಕೇರಿ, ಹಿರೇವಡ್ಡಟ್ಟಿ, ಚಿಕ್ಕವಡ್ಡಟ್ಟಿ, ಗುಮ್ಮಗೋಳ, ಹಮ್ಮಿಗಿ, ಶಿರೂರು, ಪೇಠಾಲೂರು ವಿಶೇಷವೆನಿಸಿವೆ. ಈ ಸ್ಥಳಗಳು ವಿವಿಧ ಪ್ರಾಚ್ಯಾವಶೇಷಗಳನ್ನು ಹೊಂದಿದ್ದು, ಐತಿಹಾಸಿಕ ಮಹತ್ವ ಪಡೆದಿವೆ.

### ೩.೧. ಪ್ರಾಚೀನ ನೆಲೆಗಳು

ಕರ್ನಾಟಕದಲ್ಲಿ ಇಲ್ಲಿಯವರೆಗೆ ಅನೇಕ ಪುರಾತನ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಅವುಗಳಲ್ಲಿ ಪ್ರಾಗೈತಿಹಾಸಿಕ, ಇತಿಹಾಸ ಮತ್ತು ಮಧ್ಯಕಾಲೀನ ಇತಿಹಾಸದ ನೆಲೆಗಳು ಸೇರಿವೆ. ಮುಂಡರಗಿ ತಾಲೂಕಿನ ಜಿಲ್ಲಾ ಕೇಂದ್ರವಾದ ಗದಗ ಜಿಲ್ಲೆ ಪ್ರಾಗೈತಿಹಾಸಿಕವಾಗಿ ಮಹತ್ವವನ್ನು ಹೊಂದಿದ ಜಿಲ್ಲೆಯಾಗಿದೆ. ಗದಗ ಜಿಲ್ಲೆಯ ಉತ್ತರದ ಗಡಿ ಮಲಪ್ರಭ ಮತ್ತು ದಕ್ಷಿಣಾಗ್ನೇಯದ ಗಡಿ ತುಂಗಭದ್ರಾ ನದಿಗಳ, ಉಪನದಿಗಳ ಕಣಿವೆ ಪ್ರದೇಶಗಳಲ್ಲಿ ಇತಿಹಾಸಪೂರ್ವದ ಅನೇಕ ನಿವೇಶನಗಳಿವೆ. ಮಲಪ್ರಭಾ ಮತ್ತು ಬೆಣ್ಣೆ ಹಳ್ಳಿಗಳ ಸಂಗಮ ಸ್ಥಳದಲ್ಲಿ ಆದಿಶಿಲಾಯುಗದ ಅವಶೇಷಗಳನ್ನುಳ್ಳ ನೆಲೆಗಳನ್ನು ಗುರುತಿಸಲಾಗಿದೆ. ಶಿರಹಟ್ಟಿ ತಾಲೂಕಿನ ಕೊಂಚಿಗೇರಿಯಲ್ಲಿ ಆದಿ ಹಳೆ ಶಿಲಾಯುಗದ ಒಂದು ನಿವೇಶನವಿದೆ. ಇದು ತುಂಗಭದ್ರಾ ನದಿಯ ಉಪನದಿಯಾದ ದೊಡ್ಡ ಹಳ್ಳದ ದಡದಲ್ಲಿದೆ. ಇದೇ ಶಿರಹಟ್ಟಿ ತಾಲೂಕಿನ ಜಿರಮಾದಾಪುರ ಮುಂತಾದೆಡೆಗಳಲ್ಲಿ ಆದಿಶಿಲಾಯುಗದ ನೆಲೆಗಳನ್ನು ಗುರುತಿಸಿದ್ದು ಆಹಾರ ಸಂಗ್ರಹದ ಹಂತದಲ್ಲಿದ್ದ ಆದಿಮಾನವನ ಜಿಲ್ಲೆಯ ಪೂರ್ವಕ್ಕೆ ಅಂದರೆ ರಾಯಚೂರು, ಬಳ್ಳಾರಿ ಜಿಲ್ಲೆಗಳನ್ನು ಹೊಂದಿಕೊಂಡಂತಿರುವ ಮೈದಾನ ಪ್ರದೇಶಗಳಲ್ಲಿ ಹೆಚ್ಚಾಗಿ ನೆಲೆಸಿದ್ದರೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ನವಶಿಲಾಯುಗದ ನಂತರದ ಕಬ್ಬಿಣಯುಗದ ಬೃಹತ್‌ಶಿಲಾ ಸಂಸ್ಕೃತಿಯ ಅವಶೇಷಗಳು ಈ ಜಿಲ್ಲೆಯ ರೋಣ, ನರಗುಂದ ತಾಲೂಕು ಪ್ರದೇಶದ ಹಲವು ಸ್ಥಳಗಳಲ್ಲಿ ಲಭ್ಯವಾಗಿದ್ದು ಅದರ ಕಾಲಮಾನ

ಸು.ಕ್ರಿ.ಶ.ಪೂ.೧೧೦೦ ರಿಂದ ಕ್ರಿ.ಪೂ.೨೦೦ ಎಂದು ತಿಳಿದುಬಂದಿದೆ.[೬] ಅವುಗಳಲ್ಲಿ ಈ ಗದಗ ಜಿಲ್ಲೆಯಲ್ಲಿ ನಡೆದಿರುವ ಪುರಾತತ್ವ ಅನ್ವೇಷಣೆಗಳಿಂದ ಅನೇಕ ನೆಲೆಗಳು ಬೆಳಕಿಗೆ ಬಂದಿವೆ. ಈವರೆಗೆ ಆದಿ ಹಳೆ ಶಿಲಾಯುಗದ ೧೪, ಸೂಕ್ಷ್ಮ ಶಿಲಾಯುಗದ ೧, ನೂತನ ಶಿಲಾಯುಗದ ೨೬, ನೂತನ ತಾಮ್ರ ಶಿಲಾಯುಗದ ೫, ಬೃಹತ್ ಶಿಲಾಯುಗದ ನೆಲೆಗಳು ೩ ಮತ್ತು ೧೪ ಗೋರಿ ನೆಲೆಗಳು ದೊರೆತಿವೆ. ಹೀಗೆ ಬಹು ಪ್ರಾಚೀನ ಕಾಲದಿಂದ ಜನವಸತಿಯಿಂದ ಕೂಡಿರುವ ಈ ಜಿಲ್ಲಾ ಪ್ರದೇಶದ ತಾಲೂಕುಗಳ್ಲೊಂದಾದ ಮುಂಡರಗಿಯು ಸಹ ಪ್ರಾಗಿತಿಹಾಸದ ಮತ್ತು ಇತಿಹಾಸ ಕಾಲದ ಹಲವು ಪ್ರಾಚೀನ ನೆಲೆಗಳನ್ನು ಹೊಂದಿದೆ. ಅವುಗಳಲ್ಲಿ ಬಿದರಳ್ಳಿ, ಶೀರನಹಳ್ಳಿ, ಮೇವುಂಡಿ, ಡಂಬಳ, ಕಲಕೇರಿ, ಹಿರೇವಡ್ಡಟ್ಟಿ, ಬರದೂರು, ತಾಮ್ರಗುಂಡಿ, ಡೋಣಿ, ಪೇಠಾಲೂರು, ಸಿಂಗಟಾಲೂರು, ಗುಮ್ಮಗೋಳ, ಹಮ್ಮಿಗಿ ಮುಂತಾದ ಸ್ಥಳಗಳು ಮುಖ್ಯವಾಗಿವೆ.

ಮಾನವ ತನ್ನ ಜೀವನದ ಮೊದಲ ಹಂತದಲ್ಲಿ ಬಂಡೆಗಳ ಆಸರೆಯಲ್ಲೂ ಅಥವಾ ಗುಹೆಗಳಲ್ಲೂ ವಾಸಿಸುತ್ತಿದ್ದ, ಗೆಡ್ಡೆ ಗೆಣಸುಗಳ ಜೊತೆಗೆ ಬೇಟೆಯಿಂದಲೂ ತನ್ನ ಆಹಾರವನ್ನು ಗಳಿಸುತ್ತಿದ್ದ ಪ್ರಾಣಿಗಳ ಚರ್ಮ ಗಿಡಗಳ ತೊಗಟೆಗಳೇ ಅವನ ವಸ್ತುಗಳಾಗಿದ್ದವು. ಈ ಸಾಧನೆ ಗಳಿಕೆಯಲ್ಲಿ ಕಲ್ಲಿನ ಆಯುಧಗಳನ್ನು ಹೆಚ್ಚಾಗಿ ಬಳಕೆಯಲ್ಲಿ ತಂದಿದ್ದ ಆದ್ದರಿಂದ ಮನುಷ್ಯನ ಬದುಕಿನ ಈ ಕಾಲವನ್ನು ಶಿಲಾಯುಗ ಎಂದು ಕರೆಯಲಾಗಿದೆ. ಪಾಗ್ಮಾನವ ಬಿಟ್ಟು ಹೋದ ಕಲ್ಲಿನ ಆಯುಧಗಳು ಮತ್ತು ಇತರೆ ಉಪಕರಣಗಳ ಆಧಾರದ ಮೇಲೆ ಅವನ ಜೀವನ ಕ್ರಮ ಇತ್ಯಾದಿಗಳನ್ನು ತಿಳಿಯಬಹುದು.[೭] ಪ್ರಾಗೈತಿಹಾಸಿಕ ಅವಶೇಷಗಳ ಸೂಕ್ಷ್ಮ ಅಧ್ಯಯನದ ಹಿನ್ನೆಲೆಯಲ್ಲಿ ಮುಂಡರಗಿ ಪರಿಸರದ ಇತಿಹಾಸವನ್ನು ಪ್ರಾಗೈತಿಹಾಸಿಕ ಕಾಲದಿಂದಲೂ ಗುರುತಿಸಬಹುದು.

ಮುಂಡರಗಿ ಪರಿಸರದಲ್ಲಿ ಶಿಲಾಯುಗದ ಸಂಸ್ಕೃತಿಯ ಚಲನವಲನಗಳ ಬಗೆಗೆ ನಿಖರವಾಗಿ ಹೇಳಲು ಸ್ಪಷ್ಟ ಆಧಾರಗಳ ಕೊರತೆ ಇದೆ. ಈ ಪರಿಸರದಲ್ಲಿ ಆದಿಹಳೆಯ ಶಿಲಾಯುಗದ ನೆಲೆಗಳಾಗಿ ಬಿದರಳ್ಳಿ[೮] ಹಾಗೂ ನವಶಿಲಾಯುಗದ ನೆಲೆಯಾಗಿ ಮೇವುಂಡಿ ಮಹತ್ವಹೊಂದಿದೆ. ಮೇವುಂಡಿಯಲ್ಲಿ ಲಭ್ಯವಾದ ನಯಗೊಳಿಸಿದ ಶಿಲಾಯುಧಗಳು ಮತ್ತು ತೆಳು ಮೃತ್ಪಾತ್ರೆಯ ಅವಶೇಷಗಳು, ಅಲ್ಲಿಯ ಮಣ್ಣು ಶಿಲಾಯುಗದ ನೆಲೆಯಾಗಿತ್ತೆಂಬುದನ್ನು ಸ್ಪಷ್ಟಪಡಿಸುತ್ತವೆ.[೯] ಆರಂಭಿಕ ಇತಿಹಾಸ ಕಾಲದ ನೆಲೆಯಾಗಿ ಶೀರನಹಳ್ಳಿ[೧೦] ಗ್ರಾಮ ಪರಿಸರಗಳ ಬಗೆಗೆ ದಾಖಲಾಗಿದೆ. ಮುಂಡರಗಿ ನಾಡ ದರ್ಶನ ಕೃತಿಯಲ್ಲಿ ಕಲಕೇರಿಯು ಸಹ ಪ್ರಾಗಿತಿಹಾಸದ ನೆಲೆಯಾಗಿದ್ದು ಅಲ್ಲಿರುವ ಕೆಲವು ಕುರುಹುಗಳು ಆಧಾರದ ಮೇಲೆ ಅದು ಬೃಹತ್ ಶಿಲಾಯುಗದ ನೆಲೆಯಂದು ಸ್ಪಷ್ಟ ಪಡಿಸಿದ್ದಾರೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಅಂಥ ಅಂತಹ ಯಾವ ಕುರುಹುಗಳಿಲ್ಲ. ಕ್ಷೇತ್ರಕಾರ್ಯ ಅವಧಿಯಲ್ಲೂ ಪ್ರಾಚೀನ ಸಂಸ್ಕೃತಿಯ ಯಾವ ಕುರುಹುಗಳು ಕಂಡುಬಂದಿಲ್ಲ. ಆದರೆ ಇತಿಹಾಸ ಆರಂಭ ನಂತರ ಕಾಲದ ಚಟುವಟಿಕೆಯ ಅನೇಕ ಸಾಕ್ಷಿಗಳು ಸ್ಥೂಲವಾಗಿ ಕಂಡುಬಂದಿವೆ.

ಮುಂಡರಗಿ ಪರಿಸರವು ಈಗಲೂ ಸಹ ಅರಣ್ಯಪ್ರದೇಶವಾದ ಕಪ್ಪತ್ತಗುಡ್ಡದ ಸಾಲುಗಳಿಂದಾವೃತವಾಗಿರುವುದರಿಂದ ಆ ಕಾಲಘಟ್ಟದಲ್ಲಿ ಅದು ದಟ್ಟವಾದ ಅರಣ್ಯವನ್ನು ಹೊಂದಿರಲುಬಹುದು. ಜೊತೆಗೆ ಅಲ್ಲಿರುವ ವಾಸಯೋಗ್ಯವಾದ ಭೂಮಿಯನ್ನು, ಗವಿಗಳನ್ನು ಮರದ ಪೊಟರೆಗಳನ್ನು ಈ ಭೌಗೋಳಿಕ ಪ್ರದೇಶವು ಹೊಂದಿಕೊಂಡಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಪ್ರಾಗೈತಿಹಾಸಿಕ ಕಾಲಘಟ್ಟದ ಮಾನವನು ಹುಡುಕುತ್ತಿದ್ದ ಇಂತಹ ಆಯಕಟ್ಟಿನ ಸ್ಥಳಗಳನ್ನು, ನೀರು, ಮರದ ಪೊಟರೆ, ಕೃಷಿಯೋಗ್ಯ ಭೂಮಿ, ಬೇಟೆಗಾರಿಕೆಗೆ ಅನುಕೂಲವಾಗುವ ಕಾಡು ಮತ್ತು ಪಶುಪಾಲನೆಗೆ ನೆರವಾಗುವ ಪರಿಸರ ಇದಾದುದರಿಂದ ಸಹಜವಾಗಿಯೇ ಇಲ್ಲಿ ಶಿಲಾಯುಗದ ಮಾನವರು ವಾಸವಾಗಿರಬಹುದೆಂದು ಅಭಿಪ್ರಾಯ ಪಡಬಹುದಾಗಿದೆ.

ಈ ತಾಲೂಕಿನ ತುಂಗಭದ್ರೆಯ ದಂಡೆಗುಂಟ ಹಾಗೂ ಇಲ್ಲಿರುವ ಹಲವು ಗ್ರಾಮಗಳಲ್ಲಿ ವ್ಯವಸ್ಥಿತವಾದ ಅನ್ವೇಷಣೆ ಹಾಗೂ ಉತ್ಖನನ ಕಾರ್ಯಕೈಗೊಂಡರೆ ಈ ತಹಶೀಲಿನ, ಅಥವಾ ಈ ನಾಡಿನ ಪ್ರಾಚೀನತೆಯ ಮೇಲೆ ಹೊಸ ಬೆಳಕು ಚೆಲ್ಲಬಹುದಾಗಿದೆ. ಕಲಕೇರಿ ಮತ್ತು ಜಾಲವಾಡಿಗೆಗಳಲ್ಲಿ ಕಂಡುಬರುವ ಕುಪ್ಪರಿಗಳು ಅಥವಾ ಮಣ್ಣುಗುಡ್ಡೆಗಳು ಈ ಹಿನ್ನೆಲೆಯಲ್ಲಿ ಮಹತ್ವ ಹೊಂದಿವೆ. ಈ ಕುಪ್ಪರಿಗಳು ಗುಡ್ಡಗಳ ನೆರೆಯಲ್ಲಿದ್ದುದು ಇವುಗಳ ಕಾಲ ಕ್ರಿ.ಪೂ.೮ನೇ ಶತಮಾನದಿಂದ ಹಿಡಿದು ಕ್ರಿ.ಶ.ದ ಆರಂಭದವರೆಗೆ ಎಂದು ಇತಿಹಾಸಜ್ಞರು ಊಹಿಸಿದ್ದಾರೆ. ಈ ಕುಪ್ಪರಿಗಳ ಪರಿಷವು ೩೦ ರಿಂದ ೪೦ ಪುಟಗಳವರೆಗೆ ಇದ್ದು ಬಹುಶಃ ಇವು 'ಸತ್ತವರ ಸ್ಮಾರಕ'ಗಳಾಗಿರಬಹುದೆಂದು ತರ್ಕಿಸಲಾಗಿದೆ. ಈ ಕುಪ್ಪರಿಗಳನ್ನು ಉತ್ಖನನ ಮಾಡಿದಾಗ ಅದರಲ್ಲಿ ಮಣ್ಣಿನ ಕುಡಿಕೆಗಳು, ಕಬ್ಬಿಣದ ಆಯುಧಗಳು ದೊರೆತಿವೆ. ಕಲಕೇರಿಯಲ್ಲಿ ಕಂಡು ಬರುವಂತೆ ಕುಪ್ಪರಿಗೆಗಳ ಮೇಲೆ ಎರಡು ಫೂಟು ಎತ್ತರವಾದ ಕಲ್ಲುಗಳನ್ನು ನೆಡಲಾಗಿದೆ. ಇವುಗಳ ವರ್ತುಲ ವ್ಯಾಸ ಹತ್ತು ಫೂಟು ಇದ್ದು, ಇವುಗಳನ್ನು ಅಗೆದು ತೆಗೆದಾಗ ಬಗೆ ಬಗೆಯ ಮಣ್ಣಿನ ಕುಡಿಕೆಗಳಲ್ಲಿ ಬೇರೆ ಬೇರೆ ಪುಡಿಗಳು ಕಂಡುಬಂದಿದ್ದು, ಅವು ರಾಸಾಯನಿಕ ಔಷಧಿಗಳಿರಬೇಕೆಂದು ಜನರ ನಂಬುಗೆ ಇದೆ. ಈ ಕುಪ್ಪರಿಗೆಗಳನ್ನು ಸ್ಥಳೀಯ ಸಿದ್ಧರ ಕಟ್ಟೆಗಳೆಂದು ಕರೆಯುತ್ತಾರೆ. ಇಂಥ ಕುಪ್ಪರಿಗೆಗಳ ಕಲ್ಲಿನ ಮೇಲೆ ಭೂಮಿತಿಯ ರೇಖಾ ವಿನ್ಯಾಸಗಳನ್ನು, ಹಳೆಗನ್ನಡದ ಅಕ್ಷರಗಳನ್ನು ಕೊರೆಯಲಾಗಿದ್ದು ಅವು ಅಸ್ಪಷ್ಟವಾಗಿವೆ. ಕೆಲವು ಕಲ್ಲುಗಳ ಮೇಲೆ ಸೂರ್ಯ-ಚಂದ್ರರ ರೇಖಾ ಚಿತ್ರಗಳಿವೆ.[೮] ಈ ಎಲ್ಲಾ ಪ್ರಾಗೈತಿಹಾಸಿಕ ಗುರುತುಗಳಿಂದ, ಸಂಗತಿಗಳಿಂದ ಕಲಕೇರಿ ಮತ್ತು ಜಾಲವಾಡಿಗೆಗಳು ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ್ದವೆಂದು ಖಚಿತವಾಗಿ ಹೇಳಬಹುದಾಗಿದೆ. ಕ್ಷೇತ್ರಕಾರ್ಯದ ಅವಲೋಕನ ಸಂದರ್ಭದಲ್ಲಿ ಈ ರೀತಿಯ ಕುಪ್ಪರಿಗಳು ನೆಲಸಮವಾಗಿರುವುದು ತಿಳಿದು ಬಂದಿತು.

ಈ ಪರಿಸರದಲ್ಲಿರುವ ಕೆಲವು ಗ್ರಾಮಗಳಾದ ಗುಮ್ಮಗೋಳ, ಮೇವುಂಡಿ, ಡಂಬಳ, ಬಿದರಳ್ಳಿ, ಡೋಣಿ, ಕಕ್ಕೂರು, ತಾಮ್ರಗುಂಡಿ, ವಿಠಲಾಪುರ, ಜಂತಲಿ, ಶಿರೂರು, ಹಮ್ಮಿಗಿಗಳು ಇತಿಹಾಸ

ಪ್ರಸಿದ್ಧವಾಗಿವೆ. ಶೀರನಹಳ್ಳಿ, ಬೀಡನಾಳ, ಗಂಗಾಪೂರ, ಮುರಡಿ, ಶಿರೋಳ, ಬಸಾಪೂರ, ಯಕ್ಲಾಸಪುರ, ಬಾಗೇವಾಡಿ, ವೆಂಕಟಾಪುರ, ಕದಾಂಪುರ, ಹೆಸರೂರು ಮೊದಲಾದ ಗ್ರಾಮಗಳು ಒಂದಿಲ್ಲೊಂದು ಸಾಂಸ್ಕೃತಿಕ ಅವಶೇಷಗಳನ್ನು, ದೇವಾಲಯಗಳನ್ನು ಹೊಂದಿವೆ. ಗರುಡನಿಗೆ ಪ್ರತ್ಯೇಕ ಗುಡಿಗಳಿರುವುದು ಅಪರೂಪ ಆದರೆ ಈ ತಾಲೂಕಿನ ತುಂಗಭದ್ರೆಯ ತೀರದಲ್ಲಿರುವ ಹೆಸರೂರಿನಲ್ಲಿ ಗರುಡನಿಗಾಗಿ ದೇವಾಲಯ ಕಟ್ಟಿಸಿರುವುದು ಒಂದು ವೈಶಿಷ್ಟ್ಯ. ಇದು ಅರ್ವಾಚೀನ ಕಾಲದ ದೇವಾಲಯವಾಗಿದೆ.

ಪ್ರಾಚೀನ ಕಾಲದಲ್ಲಿ ಮುಂಡರಗಿ ನಾಡನ್ನು ಕೆಲವು ಅರಸು ಮನೆತನಗಳು ಆಳುತ್ತಿದ್ದ ಬಗ್ಗೆ ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ರಾಜನ/ಅಧಿಪತಿ/ಆಳರಸನ ಕೈಕೆಳಗೆ ಆಳ್ವಿಕೆ ಮಾಡುತ್ತಿದ್ದ ಮಹಾಮಾಂಡಲಿಕರು, ಮಾಂಡಲಿಕರು, ಮಹಾಸಾಮಂತರು, ಊರೊಡೆಯರು, ಗಾವುಂಡರು, ಅಧಿಕಾರ ನಡೆಸುತ್ತಿದ್ದರು. ಚಾಲುಕ್ಯ ವಿಕ್ರಮಾದಿತ್ಯನ ರಾಣಿಯರಾದ ಭಾಗಲದೇವಿ, ಹಿರಿಯರಾಣಿ ಲಕ್ಷ್ಮಿದೇವಿ ಡೋಣಿಯಲ್ಲಿ ಆಳುತ್ತಿದ್ದ ಸಂಗತಿ ವಿದಿತವಾಗಿದೆ. ಕಕ್ಕರಸನು ವಡವಡ್ಡಿಯನ್ನು (ಚಿಕ್ಕವಡ್ಡಟ್ಟಿ) ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದನು. ಮೇವುಂಡಿಯು ಸಹ ರಾಜಧಾನಿಯಾಗಿ ಮೆರೆದ ಪ್ರದೇಶವಾಗಿತ್ತೆಂದು ಚಾರಿತ್ರಿಕ ದಾಖಲೆಗಳಿಂದ ತಿಳಿದುಬರುತ್ತದೆ.

**ತಾಮ್ರಗುಂಡಿ**

ಮುಂಡರಗಿ ತಾಲೂಕಿನ ವಾಯುವ್ಯ ಭಾಗದಲ್ಲಿರುವ ಈ ಚಾರಿತ್ರಿಕ ಗ್ರಾಮ ಪ್ರಾಚೀನ ಶಾಸನಗಳಲ್ಲಿ 'ಕಿಸುಗುಣ್ಡಿ' ಎಂದೇ ಉಲ್ಲೇಖಿತಗೊಂಡಿದೆ. ಇದು ಹಿಂದೆ ೫೦ ಮಹಾರಾಜರನ್ನು ಹೊಂದಿದ್ದ ಅಗ್ರಹಾರವಾಗಿದ್ದು ಮಾಸವಾಡಿ-೧೪೦ಕ್ಕೆ ಸೇರಿತ್ತು. ಇಲ್ಲಿರುವ ಈಶ್ವರ ದೇವಾಲಯದ ಮುಂಭಾಗದ ಒಂದನೇ ಸೋಮೇಶ್ವರನ ಕ್ರಿ.ಶ.೧೦೫೪ರ ಶಾಸನವು ಕಿಸುಗುಣ್ಡಿಯನ್ನಾಳುತ್ತಿದ್ದ ದಾಸಿಮಯ್ಯನ ಮೂಲಸ್ಥಾನದ ಕಲಿದೇವರಿಗೆ, ವಿಷ್ಣುದೇವರಿಗೆ ನಂದಾದೀಪಕ್ಕೆಂದೂ, ಸತ್ರಕ್ಕೆಂದೂ, ಮಹಾಜನರ ಕೈಯಲ್ಲಿ ದಾನಕೊಟ್ಟ ಅಂಶವನ್ನು ತಿಳಿಸುತ್ತದೆ. ಇದರಿಂದ ಶಾಸನೋಕ್ತ ಮೂಲಸ್ಥಾನದ ಕಲಿದೇವರಗುಡಿ ಇಂದಿನ ಈಶ್ವರ ದೇವಾಲಯವೆಂದು ಗುರುತಿಸಬಹುದಾಗಿದೆ. ಕಲ್ಯಾಣ ಚಾಲುಕ್ಯರ ಕಲಾ ಶೈಲಿಯಲ್ಲಿ ದೇವಾಲಯ ರಚನೆಯಾಗಿದೆ ಹಾಗೂ ಅದರ ಆವರಣದಲ್ಲಿ ಸಪ್ತಮಾತೃಕಾ ಶಿಲ್ಪ ಕಂಡುಬರುತ್ತದೆ.

**ನಾಗರಹಳ್ಳಿ**

ಮುಂಡರಗಿ ತಾಲೂಕಿನ ತುಂಗಭದ್ರಾ ನದಿ ತೀರದಲ್ಲಿರುವ ಈ ಗ್ರಾಮದಲ್ಲಿ ಶಿಥಿಲವಾಗಿರುವ ಪಂಚಲಿಂಗ ದೇವಾಲಯ ಕಂಡುಬರುತ್ತದೆ. ಅಲ್ಲಿರುವ ಎರಡು ಶಾಸನಗಳಲ್ಲೊಂದಾದ ಕ್ರಿ.ಶ.೧೦೨೨ರ ಶಾಸನವು ಇಮ್ಮಡಿ ಜಯಸಿಂಹನ ಗರುಡನಾದ ದಾಸಿರಾಜನು ಮಾಸವಾಡಿ-೧೪೦ನ್ನು ಆಳುವಾಗ, ತುಂಗಭದ್ರಾ ತೀರದ ಅರಗಿವಾಳದ ನಾಗಮಗಾವುಂಡನು ತ್ರಿಭುವನ ನಾರಾಯಣ ಧರ್ಮಸೆಟ್ಟಿಯು

ಮಾಡಿಸಿದ ಧರ್ಮೇಶ್ವರ ದೇವರಿಗೆ ಆರುಮತ್ತೂರು ಭೂಮಿಯನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಬರುವ ಅರಗಿವಾಳ ನಾಗರಹಳ್ಳಿಯ ಪ್ರಾಚೀನ ಹೆಸರಾಗಿದ್ದು, ಹಿಂದೆ ಇದು ಮಾಸವಾಡಿ-೧೪೦ಕ್ಕೆ ಸೇರಿತ್ತೆಂಬ ಅಂಶವೂ ಗೊತ್ತಾಗುತ್ತದೆ. ಮೇಲಾಗಿ ಶಾನನೋಕ್ತ ಧರ್ಮೇಶ್ವರ ಗುಡಿ ಇಂದಿನ ಪಂಚಲಿಂಗ ದೇವಾಲಯವೆಂದು ಇದರಿಂದ ತಿಳಿದುಬರುತ್ತದೆ.”[೧೦]

**ಡಂಬಳ**

ಮುಂಡರಗಿ ತಾಲೂಕಿನ ಗ್ರಾಮವಾದ ಡಂಬಳವು ಪ್ರಮುಖ ಐತಿಹಾಸಿಕ ಕೇಂದ್ರವಾಗಿದೆ. ಕರ್ನಾಟಕದ ಪ್ರಮುಖ ಬೌದ್ಧಕೇಂದ್ರಗಳಲ್ಲೊಂದಾದ ಡಂಬಳವನ್ನು ಶಾಸನಗಳಲ್ಲಿ 'ಧರ್ಮವೊಳಲು', 'ಧರ್ಮಪುರ' ಎಂದು ಉಲ್ಲೇಖಿಸಲಾಗಿದೆ. ಈ ಸ್ಥಳ ಕರ್ನಾಟಕದಲ್ಲಿ ಕಂಡುಬರುವ ಹಲವೇ ತಾರಭಗವತೀ ವಿಹಾರವಿದ್ದ ಸ್ಥಳಗಳಲ್ಲೊಂದು ಎಂದು ಡಾ.ಎಚ್.ಆರ್.ರಘುನಾಥಭಟ್ ಅಭಿಪ್ರಾಯಪಡುತ್ತಾರೆ. ಕ್ರಿ.ಶ. ೧೦೯೫ರ ಡಂಬಳ ಶಾಸನದಲ್ಲಿ ಉಲ್ಲೇಖಗೊಂಡಿರುವಂತೆ ಆರನೇ ವಿಕ್ರಮಾದಿತ್ಯನ ಹಿರಿಯರಸಿ ಲಕ್ಷ್ಮೀದೇವಿಯು ಲೊಕ್ಕಿಗುಂಡಿಯ ೧೬ ವರ್ತಕರ ದೇಣಿಗೆಯಿಂದ ಧರ್ಮವೊಳಲಿನಲ್ಲಿ ತಾರಾಭಗವತಿಯ ವಿಗ್ರಹವೊಂದನ್ನು ನಿರ್ಮಿಸಿದಳು. ಇದೇ ಊರಿನಲ್ಲಿ ಸಿಕ್ಕಿರುವ ಕ್ರಿ.ಶ. ೧೧೯೮ರ ಹಾಗೂ ಕ್ರಿ.ಶ. ೧೨೮೩ರ ಶಾಸನಗಳಲ್ಲೂ ಬೌದ್ಧ ವಿಹಾರಕ್ಕೆ ನೀಡಿದ ದಾನಗಳ ಬಗೆಗೆ ಉಲ್ಲೇಖ ಕಂಡುಬರುತ್ತದೆ.[೧೧]

ಈ ಪ್ರದೇಶದಲ್ಲಿ ಚಾಲುಕ್ಯರ ಸಾಮಂತರಾಗಿದ್ದ ರಾಷ್ಟ್ರಕೂಟರು ಮುಂದೆ ಸ್ವತಂತ್ರರಾಗಿ ಕ್ರಿ.ಶ. ೭೫೩-೯೭೩ರ ವರೆಗೆ ಆಳಿದರು. ಕ್ರಿ.ಶ. ೯೭೩ ರಿಂದ ೧೧೯೮ರ ವರೆಗೆ ಆಳಿದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಡಂಬಳವು ಮಾಸವಾಡಿ-೧೪೦ರಲ್ಲಿದ್ದು ಮುಂಡರಗಿ ಉಚ್ಛ್ರಾಯ ಸ್ಥಿತಿಗೆ ಬಂದುದನ್ನು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಈ ನಾಡಿನ ಜನರ ಮನೋಧರ್ಮ, ದಾನ, ಬೆಳೆಗಳು ನಾಡಿನ ಹಾಗೂ ದೇವಾಲಯಗಳ ವರ್ಣನೆ ಕಲ್ಮೇಶ್ವರ ಗುಡಿಗೆ ಹೋಗುವ ಬಾಗಿಲ ಬದಿಯ ಎಡಕಂಬದ ಮೇಲಿರುವ ಶಾಸನವೊಂದು ಬಣ್ಣಿಸಿದೆ.

ಒಂದನೆಯ ಸೋಮೇಶ್ವರನ ಕಾಲದಲ್ಲಿ ಕ್ರಿ.ಶ.೧೦೫೫ರಲ್ಲಿ ಬಾಚಿಸೆಟ್ಟಿಯ ಅಳಿಯನಾದ ಬೀರಯ್ಯ ಸೆಟ್ಟಿನಗರ ಜಿನಾಲಯಕ್ಕೆ-೩೫ ಗದ್ಯಾಣಗಳನ್ನು ದಾನವಿತ್ತ ಸಂಗತಿಯನ್ನು ಶಾಸನದಲ್ಲಿ ಹೇಳಲಾಗಿದೆ. ಚಾಲುಕ್ಯ ತ್ರಿಭುವನ ಮಲ್ಲನ (೬ನೇ ವಿಕ್ರಮಾದಿತ್ಯ) ಕಾಲದಲ್ಲಿ ಪೆರ್ಮಭೂಪನು ಮಾಸವಾಡಿ-೧೪೦ನ್ನು ಆಳುತ್ತಿದ್ದನು. ಆಗ ಕಿಬ್ಬರಸ ಬಾಚಿಕಬ್ಬೆಯರ ಪುತ್ರ ಅಜ್ಜಯನಾಯಕ ಈ ಧರ್ಮವೊಳ್‌ನಲ್ಲಿ ಅಜ್ಜೇಶ್ವರ ದೇವಾಲಯ (ಇಂದಿನ ದೊಡ್ಡಬಸಪ್ಪನ ಗುಡಿ)ವನ್ನು ಕಟ್ಟಿಸಿದನಲ್ಲದೆ ಹೆಮ್ಮಾಡಿರಸನಿಗೆ ೧೬ ಶೆಟ್ಟಿಗಳಿಂದ ಭೂಮಿಯನ್ನು ಕೊಂಡುಕೊಟ್ಟನು.

ಈ ಗ್ರಾಮವು (ಡಂಬಳ) ಕರ್ನಾಟಕ ಭೂಮಿಯೆಂಬ ಸ್ತ್ರೀಯ ನಡುವಿಗ ಶ್ರೇಷ್ಠ ಮುತ್ತಿನಹಾರದಂತಿತ್ತೆಂಬುದನ್ನು ಇದರ ಹೊರಹೊಲಯದಲ್ಲಿ ಸುಗಂಧವುಳ್ಳ ಭತ್ತ, ಕಾಲುವೆಯಲ್ಲಿ

ಆಡುವ ಹಂಸಗಳು, ಕೇಕೆ ಹಾಕುವ ನವಿಲುಗಳಿಂದ, ರಾಜಗಿಳಿಗಳಿಂದ ಶೋಭಾಯಮಾನವಾಗಿತ್ತೆಂಬುದನ್ನು ಶಾಸನದಲ್ಲಿ ವರ್ಣಿಸಲಾಗಿದೆ.

"ಆತನಿಂ (ಪೆರ್ಮನೃಪನಿಂ) ಪರೀಕ್ಷ್ಯ ಮಾಡಿರ್ದ ಮಾಸೇವಾಡಿ ನಾಡಿಗೆ ಕಟ್ಟಿಪಟ್ಟ

ಮುಮಿಟ್ಟ ಬೊಟ್ಟಮಳಟ್ಟ ಕಳಸಮುಮಿ |

ರ್ಪರಂತೆ ಧರ್ಮವೊಳಲೆಂಬ ಮಹಾಪಟ್ಟಣಂ ವಿರಾಜೆ |

ಸ್ತುತಿದರ್ಪುದುದರ ಮಹಿಮೆಯಂ ಪೇಳ್ವೆಡೆ....."

ಶಕೆ ೧೧೦೬ ಕ್ರೋಧಿನಾಮ ಸಂವತ್ಸರದಲ್ಲಿ ಪಶ್ಚಿಮ ಚಾಲುಕ್ಯ ಚಕ್ರವರ್ತಿ ಸೋಮೇಶ್ವರ ದೇವನ ಮಹಾಪ್ರಧಾನಿ ತೇಜಿಮಯ್ಯ, ದಂಡನಾಯಕನಿದ್ದ ದೇವರಸ, ಸ್ವಯಂಭೂದೇವರ ಎದುರಿಗೆ ಇರುವ ಇಂದಿನ ಗೋಣ ಸಮುದ್ರವೆಂದು (ಡಂಬಳಕೆರೆ) ಕರೆಯಲ್ಪಡುವ ಕೆರೆಗೆ ಕೋಡಿ ನಿರ್ಮಿಸಿದ ಸಂಗತಿಯನ್ನು ದೊಡ್ಡಬಸಪ್ಪನ ಗುಡಿಯಲ್ಲಿರುವ ಶಾಸನ ತಿಳಿಸುತ್ತದೆ.[೨]

ಚಾಲುಕ್ಯ ವಿಕ್ರಮಾದಿತ್ಯನ ಹಿರಿಯರಾಣಿ ಲಕ್ಷ್ಮೀದೇವಿಯು 'ಪದಿನೆಂಟು ಅಗ್ರಹಾರಮುಮಂ ಧರ್ಮಪುರಮುಂ' ಆಳುತ್ತಿದ್ದಳೆಂದು ಕ್ರಿ.ಶ. ೧೦೯೬-೯೭ರ ದೇವಾಲಯ (ಡಬ್ಬುಗಲ್ಲು ಗುಡಿ)ದ ಮಂಟಪ ವೇದಿಕೆಯಲ್ಲಿಯ ಶಾಸನವೊಂದು ೧೨ನೆಯ ಶತಮಾನಕ್ಕೆ ಸೇರಿದ್ದು, ಇದರಲ್ಲಿ ಮಾಧವೇಶ್ವರ ದೇವಾಲಯಕ್ಕೆ ಒಂದು ಗಡಿಂಬ ಭೂಮಿ ದಾನವಿತ್ತ ಉಲ್ಲೇಖವಿದೆ. ಜೈನ ಬಸದಿಯ ಪ್ರವೇಶ ದ್ವಾರದ ಎಡಬದಿಗಿರುವ ಕ್ರಿ.ಶ. ೧೨೮೩ರ ಕಾಲದ ಶಾಸನದಲ್ಲಿ ಭೋಗದೇವ ದೇವಾಲಯ ಆಚಾರ್ಯ ಬಗೆಗೆ ಉಲ್ಲೇಖವಿದ್ದು, ಭೂದಾನ ಮಾಡಿದ ವಿವರಗಳಿವೆ.[೩]

ಡಾ.ಎಚ್.ಆರ್.ರಘುನಾಥಭಟ್ಟರವರು ಕರ್ನಾಟಕದಲ್ಲಿ ಕಂಡುಬರುವ ಹಲವೇ ತಾರಾಭಗವತಿ ವಿವಾಹವಿದ್ದ ಸ್ಥಳಗಳಲ್ಲಿ ಡಂಬಳವು ಒಂದೆಂದೂ ಅಭಿಪ್ರಾಯಪಟ್ಟಿದ್ದಾರೆ.

ಡಂಬಳವು ಬೌದ್ಧಮತ ಹಾಗೂ ಬೌದ್ಧವಾಸ್ತು ಶಿಲ್ಪಕಲೆಗೆ ನೆಲೆಯಾಗಿತ್ತೆಂಬುದು ಸ್ವಾರಸ್ಯಕರ ಸಂಗತಿ. ಕಲ್ಯಾಣಿ ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ (೧೦೯೮) ಸಂಗಮ ಸೆಟ್ಟಿ ನಿರ್ಮಿಸಿದ ಬೌದ್ಧವಿಹಾರಕ್ಕೆ ನಂದಾದೀಪಕ್ಕಾಗಿ ಸೊಳಸಿಯ ಪ್ರಮಾಣದ ಸೊಂಟಿಗೆಯ ಗಾಣದಲ್ಲೊಂದು ಸೊಂಟಿಗೆ ಎಣ್ಣೆಯನ್ನು 'ತೆಲ್ಲಿಗರಯ್ವತ್ತೊಕ್ಕಲು' ಕೊಟ್ಟರೆಂಬ ವಿಚಾರವು ಸ್ಥಳೀಯ ಶಾಸನಗಳಿಂದ ತಿಳಿದುಬರುತ್ತದೆ.

ಈ ಶಾಸನದ ವಿಷಯವಾಗಿರುವ ವಿದ್ವಾಂಸರಾದ ರಘುನಾಥಭಟ್ಟ ಎಚ್.ಆರ್. ಪ್ರಶ್ನಿಸುವುದೇನೆಂದರೆ ಈ ಶಾಸನದಲ್ಲಿ ಉಲ್ಲೇಖಿತವಾದ ಲೊಕ್ಕಿಗುಂಡಿಯ ವಡ್ಡವ್ಯವಹಾರಿ ಸಂಗಮಯ್ಯ ಸೆಟ್ಟಿಕಟ್ಟಿಸಿದ ಈ ತಾರಾದೇವಿ ವಿಹಾರ ಎಲ್ಲಿದೆ? ಅದರ ಸ್ಥಳ ನಿರ್ದೇಶನ ಈಗ ಸಾಧ್ಯವೆ? ಅದಕ್ಕೆ ಸಂಬಂಧಿಸಿದ ಬೌದ್ಧ ಅವಶೇಷಗಳೇನು ಉಳಿದಿಲ್ಲವೆ? ಇದ್ದರೆ ಎಲ್ಲಿವೆ ಹೀಗೆ ಅನೇಕ ಪ್ರಶ್ನೆಗಳಿಗೆ ಉತ್ತರ

ಪಡೆಯಲು ಅಥವಾ ಖಚಿತತೆ ಪಡೆಯುವದಕ್ಕಾಗಿ ಡಂಬಳದಲ್ಲಿ ಶೋಧನಾ ಕಾರ್ಯದಲ್ಲಿ ತೊಡಗಿದಾಗ ಮಹತ್ವದ ವಿಷಯ ಬೆಳಕಿಗೆ ಬಂದಿತು. ಅದರಂತೆ ಸರ್ವೇಕ್ಷಣೆ ಶೋಧನೆಯ ಪ್ರತಿಫಲವಾಗಿ ಡಂಬಳ ಹಾಗೂ ಅದರ ಪರಿಸರದಲ್ಲಿ ಆರ್ಯತಾರಾಭಗವತಿ(?) ಶಿಲ್ಪವನ್ನೊಳಗೊಂಡ ಬೌದ್ಧಭಿಕ್ಷುವಿನ ಉಬ್ಬುಶಿಲ್ಪ ಫಲಕ ಹಾಗೂ ಬೌದ್ಧವಿವಾಹರದ ಬಾಗಿಲುವಾಡಕ್ಕೆ ಸಂಬಂಧಿಸಿದ ಬೌದ್ಧಯಕ್ಷ ಶಿಲ್ಪವನ್ನೊಳಗೊಂಡ ಇನ್ನೊಂದು ಫಲಕ ಪತ್ತೆಯಾದವು.

ಈ ಶಿಲ್ಪಫಲಕಗಳನ್ನು ಕುರಿತು ಎಂಬುದನ್ನು ತಿಳಿಸುತ್ತಾ ಅದರಲ್ಲಿ ಒಂದು ಬೌದ್ಧ ಮತ್ತು ತಾರಾಭಗವತಿ ಮೂರ್ತಿಶಿಲ್ಪವಿದೆ. ಇನ್ನೊಂದು ಬಾಗಿಲುವಾಡ ಫಲಕದ ಚೂರಿನಲ್ಲಿ ವಿಶಿಷ್ಟ ರೀತಿಯ ಬಾಗಿಲುಶಾಖೆ ಹಾಗೂ ಯೋಗಪಟ್ಟವುಳ್ಳ ಭೋದಿಸತ್ವ ಯಕ್ಷನ (ಜಂಬಾಲ!) ಶಿಲ್ಪವಿರುವದು ಪತ್ತೆಯಾಯಿತು. ಲಭ್ಯವಾದ ಎರಡು ಪ್ರಾಚ್ಯಾವಶೇಷಗಳನ್ನು ಅಧ್ಯಯನ ಮಾಡಿದ ರಘುನಾಥಭಟ್ಟರು ಅಂತಿಮವಾಗಿ ತೀರ್ಮಾನಕ್ಕೆ ಬಂದಿದ್ದೆಂದರೆ ಈ ಶಿಲ್ಪ ಫಲಕಗಳು ಹಾಗೂ ಶಾಸನವಿರುವ ದಿಬ್ಬದ ಭಗ್ನಮಂದಿರವು ಮೂಲತಃ ಬೌದ್ಧ ತಾರಾಭಗವತಿ ವಿಹಾರವಾಗಿದೆ ಎಂದು ಖಚಿತ ಪಡಿಸಿದರು.

ಅಷ್ಟೇ ಅಲ್ಲದೆ ಅವರು ಪ್ರಸ್ತಾಪಿಸುವ ಇತರೆ ವಿಷಯಗಳೆಂದರೆ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಆತನ ಹಿರಿಯರಸಿ ಲಕ್ಷ್ಮೀದೇವಿಯು ಧಮ್ಮಾಪುರ ಪ್ರದೇಶವನ್ನಾಳುತ್ತಿದ್ದಾಗ ಧರ್ಮವೊಳಲಿನ ಹದಿನಾರು ಸೆಟ್ಟಿಗಳು ಸೇರಿ ಬೌದ್ಧವಿಹಾರ ಕಟ್ಟಿಸಿ ದಾನದತ್ತಿ ನೀಡಿದರು. (೧೦೯೫) ಅದಕ್ಕಿಂತ ಹೆಚ್ಚಿನ ರೀತಿಯಲ್ಲಿ ಲಕ್ಕುಂಡಿಯ ವಡ್ಡವ್ಯವಹಾರಿ ಸಂಘುವಯ್ಯ ಸೆಟ್ಟಿ ತಾರಾ ಭಗವತಿ ವಿಹಾರವನ್ನು ದೊಡ್ಡ ಪ್ರಮಾಣದಲ್ಲಿ ನಿರ್ಮಿಸಿದ (೧೦೯೮). ಶ್ರೀ ತಾರಾಭಗವತಿಯನ್ನು ಈ ಸೆಟ್ಟರು ವಿಶೇಷವಾಗಿ ಸ್ತುತಿಸಿದ್ದಾರೆ. ಇವನ್ನೆಲ್ಲಾ ದಾಖಲಿಸಿರುವ ಶಾಸನದ ಶಿರೋಫಲಕದ ಮೇಲೆ (Head-Prices) ತಾರಾಭಗವತೀ ಶಿಲ್ಪವನ್ನು ಕೆತ್ತಿದ್ದಾರೆ. 'ನಮೋ ಬುದ್ಧಾಯ, ಭಗವತೀ ತಾರಾ ನಮಸ್ತುಭ್ಯಂ" ಎಂದು ಆರಂಭವಾಗುವ ಬೌದ್ಧಧರ್ಮಿಯ ದೀರ್ಘ ಶಾಸನದ ಪಾರದಲ್ಲಿ ಸೇರಿರುವ ಅಷ್ಟೇ ಬೃಹತ್ತಾಗಿರಬಹುದಾದ ತಾರಾಭವತಿ ವಿಹಾರ ಹಾಗೂ ಅದನ್ನು ಖಚಿತಪಡಿಸುವ, ಈಗ ಪತ್ತೆಯಾಗಿರುವ ಸುಂದರ ಶಿಲಾಶಿಲ್ಪಗಳನ್ನು ವಿಶ್ಲೇಷಣೆ ಮಾಡಿ ಅದರ ಸಾಂಸ್ಕೃತಿಕ ಕಲಾ ಮಹತ್ವವನ್ನು ಸಂಗ್ರಹಿಸಿಡುವ ಬಗ್ಗೆ ತಿಳಿಸಿದ್ದು ಹೀಗೆ.

*ಮೊದಲನೆಯದಾಗಿ ಪತ್ತೆಯಾಗಿರುವ ಶಿಲ್ಪಾವಶೇಷಗಳು ಮಧ್ಯಕಾಲೀನ ಕರ್ನಾಟಕದ ಕಲ್ಯಾಣ ಚಾಲುಕ್ಯ ಶೈಲಿಯ ಬೌದ್ಧ ಶಿಲ್ಪಕಲೆಗೆ ಮತ್ತೆರಡು ಸೇರ್ಪಡೆಗಳಾಗಿ ಮಹತ್ವವನ್ನು ಹೊಂದಿವೆ.

*ಎರಡನೆಯದಾಗಿ ಮಧ್ಯಕಾಲೀನ ಕರ್ನಾಟಕದಲ್ಲಿ ಇತರ ಧರ್ಮಗಳು ತೀರಾ ಕಡೆಗಣಿಸಬಹುದಾಗಿದ್ದು ಧರ್ಮವಾಗಿರದೆ 'ನಾನೂ ಇದ್ದೇನೆ' ಎಂದು ಕೈಯೆತ್ತಿ ತೋರಿಸಿಕೊಳ್ಳುವಷ್ಟರ ಮಟ್ಟಿಗಾದರೂ ಬೌದ್ಧಧರ್ಮವು ಪ್ರಬಲವಾಗಿತ್ತು ಎಂಬುದಾಗಿದೆ.

"ಮೂರನೆಯದಾಗಿ ಈ ಕಾಲಾವಧಿಯಲ್ಲಿ ಬುದ್ಧನಿಗಿಂತ ತಾರಾಭಗವತೀ ಹೆಚ್ಚಿನ ಪ್ರಾಧಾನ್ಯ ಪಡೆದಳು. ಬಳ್ಳಿಗಾವೆ, ಬನವಾಸಿ-ಡಂಬಳ-ಕೋಳಿವಾಡಗಳಲ್ಲಿದ್ದ ತಾರಾಭಗವತೀ ವಿಹಾರ, ಭಗವತೀ ಆರಾಧನೆ, ಆ ಸಂಬಂಧದ ದಾನ-ದತ್ತಿ ವಿವರಗಳು ಸ್ವಾರಸ್ಯಕರವಾಗಿ ಮಹತ್ವ ಹೊಂದಿವೆ.

ಮೂಲದಲ್ಲಿ ಯಜ್ಞಯಾಗಾದಿ ವಿವರಗಳಿಂದ ತುಂಬಿದ ವೈದಿಕ ಆರಾಧನೆಗೆ ಪ್ರತಿಕ್ರಿಯೆಯಾಗಿ ಮೂಡಿಬಂದ ಸರಳ ಬೌದ್ಧಮತವು ಬರಬರುತ್ತಾ ಶಾಕೋಪಶಾಖೆಯಾಗಿ, ತಾಂತ್ರಿಕ ಆರಾಧನಾ, ಸ್ವರೂಪ ಪಡೆದದ್ದು ಒಂದೆಡೆಯಾದರೆ, ವಜ್ರಯಾನದಂತಹ ತಾಂತ್ರಿಕ ವಿಧಾನ, ತಾರಾಭಗವತಿಯ ಆರಾಧನೆ-ಉತ್ಸವ ಹೆಚ್ಚು ಜನಪ್ರಿಯವಾಗಿದದ್ದು ಇನ್ನೊಂದೆಡೆ ಎಂಬುದು ಇಲ್ಲಿ ಗಮನಾರ್ಹ ಸಂಗತಿಯಾಗಿದೆ.

ರಘುನಾಥಭಟ್ಟರು ತಾರಾಭಗವತಿಯ ಮಹತ್ವವನ್ನು ಚರ್ಚಿಸುತ್ತಾ ತಾರೆ ಜಗತ್ತಿನ ರಕ್ಷಕಳು, ದುರ್ಬಲರಿಗೆ ಶಕ್ತಿದಾಯಕಳು. ತಾರಾಮಂತ್ರಪಠಣದಿಂದ ಪಾಪ ಪರಿಹಾರವಾಗುವುದು. ಜನಸಾಮಾನ್ಯರ ಕಷ್ಟನಷ್ಟಗಳ ನಿವಾರಣೆಗಾಗಿ ಅವಳನ್ನು ಆರಾಧಿಸುವುದು ಅಗತ್ಯ ಎಂಬ ಭಾವನೆ ಜನರಲ್ಲಿ ಮೂಡಿಬಂದಿತು.

ಒಟ್ಟಿನಲ್ಲಿ ಆಧ್ಯಾತ್ಮಿಕ ಸಾಧನೆ ಮಾಡಿ ಕೇವಲ ಜ್ಞಾನ ಪಡೆದ ವ್ಯಕ್ತಿಗಿಂತ ಲೌಕಿಕ ಕಷ್ಟನಿವಾರಕ ತಾರಾಭಗವತಿಯಂಥ ಸ್ತ್ರೀಶಕ್ತಿದೇವಿಯಾರಾಧನೆ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯಿತು. ಅನೇಕ ಅಂಶಗಳಿಂದ ಡಂಬಳವು ಬೌದ್ಧ ಸಾಂಸ್ಕೃತಿಕ ಕೇಂದ್ರವೆಂದು ಸ್ಪಷ್ಟವಾಗಿ ಗುರುತಿಸಬಹುದು. ಅಷ್ಟೇ ಅಲ್ಲದೆ ಇಲ್ಲಿ ಲಭ್ಯವಾಗಿರುವ ಅನೇಕ ಬೌದ್ಧಾವಶೇಷಗಳಿಂದ ಇದು ಬೌದ್ಧ ನೆಲೆಯಾಗಿತ್ತು ಎಂಬುದಕ್ಕೆ ಪುಷ್ಟಿ ನೀಡುತ್ತವೆ.[೧೪]

**ಮೇವುಂಡಿ**

ಮೇವುಂಡಿಯು ಮುಂಡರಗಿ ತಾಲೂಕಿನ ವಾಯುವ್ಯಕ್ಕೆ ಹತ್ತು ಕಿ.ಮೀ. ದೂರದಲ್ಲಿರುವ ಗ್ರಾಮ. ಇತಿಹಾಸ ಕಾಲದ ನೆಲೆಯಾದ ಮೇವುಂಡಿಯನ್ನು ಪ್ರಾಚೀನ ಶಾಸನಗಳಲ್ಲಿ ಮೇಳೆಮಡು, ಮೇಳುವಿಡು, ಮೇಲುವಿಡಿ, ಎಂತೆಲ್ಲಾ ಉಲ್ಲೇಖಿತವಾಗಿದ್ದು, ಹಿಂದೆ ಮಾಸವಾಡಿ-೧೪೦ರ ರಾಜಧಾನಿ ಪಟ್ಟಣವಾಗಿತ್ತು. ಮೇಲಾಗಿ ೫೦೦ ಮಹಾಜನರನ್ನು ಹೊಂದಿದ್ದ ಅಗ್ರಹಾರವೂ ಆಗಿತ್ತೆಂಬ ಅಂಶವನ್ನು ಮೇವುಂಡಿಯ ಕ್ರಿ.ಶ.೮೯೭ರ ಶಾಸನ ತಿಳಿಸುತ್ತದೆ.[೧೫] ಇಲ್ಲಿರುವ ವೆಂಕಟರಮಣ ದೇವಾಲಯದ ಮುಂಭಾಗದಲ್ಲಿ ಮೂರು ಶಾಸನಗಳಿದ್ದು ಅವು ಪ್ರಕಟಗೊಂಡಿವೆ. ಕ್ರಿ.ಶ.೯ನೇ ಶತಮಾನಕ್ಕೆ ಸೇರಿದ ಈ ಶಾಸನಗಳು ರಾಷ್ಟ್ರಕೂಟ ಎರಡನೆಯ ಕೃಷ್ಣನ ಕಾಲಕ್ಕೆ ಸೇರಿದವು. ಕೋಗಳಿ-೫೦೦, ಮಾಸವಾಡಿ-೧೪೦ ಹಾಗೂ ಪುಲಿಗೆರೆ-೩೦೦ರ ಭಾಗಗಳನ್ನು ಆಳುತ್ತಿದ್ದ 'ಕುಪ್ಪೆರಸ'ನು ಮೇವುಂಡಿಯನ್ನು ಉಪರಾಜಧಾನಿ ಪಟ್ಟಣವಾಗಿ ಮಾಡಿಕೊಂಡಿದ್ದನು. ಮಹಾಸಾಮಂತನಾದ 'ಕುಪ್ಪೆರಸ'ನು ಮಹಾಸಾಮಂತನಾದ 'ಕುಪ್ಪೆರಸ'ನು ಕೋಯಿಗೇಶ್ವರ ದೇವಾಲಯವನ್ನು ಮೇವುಂಡಿಯಲ್ಲಿ ಕಟ್ಟಿಸಿ ಹಲವು ದಾನಕಾರ್ಯಗಳನ್ನು

ಮಾಡಿದನು. ಅಲ್ಲದೇ ನಿರ್ವಹಣೆಗಾಗಿ ವೇದವಾಹಕ ಭಟ್ಟಾರಕನೆಂಬ ಬ್ರಾಹ್ಮಣನಿಗೆ ಉಪಭೋಗಕ್ಕಾಗಿ ಭೂಮಿಯನ್ನು ದಾನ ನೀಡಿದ ವಿವರವನ್ನು ಈ ಶಾಸನದಲ್ಲಿ ಉಲ್ಲೇಖಿತವಾಗಿರುವುದು ತಿಳಿದು ಬರುತ್ತದೆ. ಮಾಕಿಮಯ್ಯ ಎಂಬ ಲಿಪಿಕಾರ ಈ ಶಾಸನವನ್ನು ಕಂಡರಿಸಿದ್ದಾನೆ.[೧೬]

ಯಾದವ ವಂಶದ ಸಿಂಘಣದೇವನ ಕಾಲದ ಶಾಸನವೊಂದು ದಿಡಿಗೇಶ್ವರ ದೇವಾಲಯದಲ್ಲಿದ್ದು ಮೇವುಂಡಿಯ ಸರ್ವಾಧಿಕಾರಿಯಾಗಿದ್ದ ಪುರುಷೋತ್ತಮನ ನಾಯಕಿ ಹೀರಾಬಾಯಿ ಧರ್ಮಕಾರ್ಯಮಾಡಿಸಿದ್ದು ಕ್ರಿ.ಶ. ೧೨೨೩ ಜೂನ್ ೫ ರಂದು ಬರೆಯಲ್ಪಟ್ಟಿದೆ.[೧೭] ಬಸವಣ್ಣನ ಗುಡಿಯ ಎದುರಿಗೆ ಇರುವ ಶಿಲೆಯೊಂದರಲ್ಲಿ ವೀರಸ್ವರ್ಗ ಹೊಂದಿದವರನ್ನು ಸ್ತುತಿಸಲಾಗಿದೆ. ಇಂಥ ಅನೇಕ ವೀರಗಲ್ಲುಗಳನ್ನು ಈ ಮೇವುಂಡಿಯಲ್ಲಿ ಕಾಣಬಹುದಾಗಿದೆ.

**ಡೋಣಿ**

ಮುಂಡರಗಿಯಿಂದ ವಾಯವ್ಯಕ್ಕೆ ೨೮ ಕಿ.ಮೀ. ದೂರದಲ್ಲಿರುವ ಡೋಣಿಯನ್ನು ಪ್ರಾಚೀನ ಶಾಸನಗಳಲ್ಲಿ 'ದ್ರೋಣಾಪುರ', 'ದ್ರೋಣಿಪುರ', 'ದೋಣಿಕಾಶ್ರಾಮ', 'ದೋಣಿ' ಎಂದೆಲ್ಲಾ ಉಲ್ಲೇಖಗೊಂಡಿದ್ದು ಹಿಂದೆ ಇದು ಮಾಸವಾಡಿ-೧೪೦ಕ್ಕೆ ಸೇರಿದ ಅಗ್ರಹಾರವಾಗಿದ್ದು, ೬೦ ಮಹಾಜನರನ್ನು ಹೊಂದಿತ್ತು.[೧೮] ಕ್ರಿ.ಶ.ಪೂ.೨೦೦೦ ವರ್ಷಗಳ ಹಿಂದೆ ಈ ಗ್ರಾಮವು ಲೊಕ್ಕಿಗುಂಡಿಯನ್ನು (ಲಕ್ಕುಂಡಿ) ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ಶಿಬಿ ಚಕ್ರವರ್ತಿಗೆ ಸಂಬಂಧಿಸಿತ್ತೆಂದು ಭವಿಷ್ಯೋತ್ತರ ಪುರಾಣದಲ್ಲಿ ಹೇಳಲಾಗಿದೆ.[೧೯]

ಆರನೇ ವಿಕ್ರಮಾದಿತ್ಯನ ಪಿರಿಯರಸಿ ಲಕ್ಷ್ಮೀದೇವಿ ಕ್ರಿ.ಶ. ೧೦೮೦ರಲ್ಲಿ ಡೋಣಿಯಲ್ಲಿಯೇ ರಾಜ್ಯಾಡಳಿತ ಪ್ರಾರಂಭಿಸಿದ್ದು, ಸೂಡಿಯ ಅಚಲೇಶ್ವರ ದೇವಾಲಯ ಹಾಗೂ ಅಲ್ಲಿದ್ದ ತಪೋಧನರ ಅನ್ನದಾನಕ್ಕೆ ಸೋಮೇಶ್ವರ ಪಂಡಿತರ ಪಾದ ತೊಳೆದು ಕಿಸುಕಾಡು-೭೦ರ ಬಳಿಯ ಪೊಂಗರಿ ಗ್ರಾಮವನ್ನು ದತ್ತಿಬಿಟ್ಟಿರುವಳು. ಇವಳನ್ನು ಕುರಿತ ಎಂಟು ಶಾಸನಗಳ ಪೈಕಿ ಎರಡು ಶಾಸನಗಳು ಡೋಣಿಯ ಆಡಳಿತ ಸೂಚಿಸಿವೆ. ಕ್ರಿ.ಶ.೧೯೫ರ ಕಾಲದ ಶಾಸನದಲ್ಲಿ "ಪದಿನೆಂಟುಅಗ್ರಹಾರಮುಮಂ ಧರ್ಮಪುರಮುಮಂ" ಆಳುತ್ತಿದ್ದುದಾಗಿ, ಮುಂದೆ ಇವಳ ಆಡಳಿತ ಡೋಣಿ, ಸೂಡಿ ಮೊದಲುಗೊಂಡು ೧೦ ಅಗ್ರಹಾರ ಡಂಬಳವನ್ನು ವ್ಯಾಪಿಸಿ ನಿಂತಿದೆ.

ವೀರಶೈವ ಧರ್ಮಿಯಳೆನಿಸಿದ ಈ ಲಕ್ಷ್ಮೀದೇವಿ 'ಪರಮ ಶಿವಲಿಂಗಾರ್ಚನಾ ನಿರತ, ಜಂಗಮ ಸ್ನೇಹಿ, ಶಿವಭಕ್ತಿ ಸಮೂಲ್ಲತೆ' ಎಂದು ಸೂಚಿಸಿರುವುದು ವಿಕ್ರಮಾದಿತ್ಯನ ಕಾಲಕ್ಕಾಗಲೇ ವೀರಶೈವ ಧರ್ಮ ವ್ಯವಸ್ಥಿತವಾಗಿ ಪ್ರಚಲಿತದಲ್ಲಿತ್ತೆಂದೂ ತಿಳಿದುಬರುತ್ತದೆ. ಇವಳು ತನ್ನ ಆಡಳಿತಾವಧಿಯಲ್ಲಿ ಜೈನ ಹಾಗೂ ಬೌದ್ಧ ಧರ್ಮಗಳಿಗೆ ಅವಕಾಶ ಕೊಟ್ಟು ಪರಧರ್ಮ ಸಹಿಷ್ಣು ಎಂದೆನಿಸಿಕೊಂಡಳು. ವಿಕ್ರಮಾದಿತ್ಯನ ಸುಮಾರು ಇಪ್ಪತ್ತು ರಾಣಿಯರಲ್ಲಿ ಲಕ್ಷ್ಮೀದೇವಿ, ಚಂದಲದೇವಿಯರಿಬ್ಬರೇ ಹೆಚ್ಚಾಗಿ ಸವತಿ ಮತ್ಸರ ವ್ಯಕ್ತಪಡಿಸಿರುವರು. ಲಕ್ಷ್ಮೀದೇವಿ ತನ್ನನ್ನು 'ಸವತಿ ಮದ ಭಂಜನಿ', 'ಸವತಿ

ಗಂಧಹಸ್ತಿ', 'ಅಮಲ ಸವತಿ ಮದ ಖಂಡಿಸಿ' ಎಂದುಕೊಂಡಿರುವುದಾಗಿ ಕ್ರಿ.ಶ. ೧೮೮೦ರ ಶಾಸನ ಸಾರುತ್ತದೆ.

"ಯುವರ್ತಿ ಮುಖ ತಿಳಕಂ ಲೋ

ಳವಿಲೋಚನೆ ಸವತಿಗಂಧ ಹಸ್ತಿಮಹಾದಾ

ನ ವಿನೋದೆಯೆನಿಸಿ ನೆಗಳ್ದಳ್

ಭುವನದೊಳೆ ಪುರಾಣ ಲಕ್ಷ್ಮಿ ಲಕ್ಷ್ಮಿದೇವಿ"

ಎಂದು ಕ್ರಿ.ಶ. ೧೦೯೬ರ ಶಾಸನ ಹೊಗಳಿರುವದು ಉಚಿತವಾಗಿದೆ. ಇದೆ ಶಾಸನದಲ್ಲಿ ಇವಳು ಡೋಣಿಯನ್ನಾಳುತ್ತಿದ್ದಾಗ ಶೋಕಶೆಟ್ಟಿ ಎಂಬುವನ ಬಸದಿಗೆ ಭೂದಾನ ಮಾಡಿದ ಉಲ್ಲೇಖವಿದೆ.

ಕ್ರಿ.ಶ.೧೨೯೬ರ ಶಾಸನವು ಸೇನಭೋವ ಆದಣ್ಣನ ಮೊಮ್ಮಗನಾದ ಶ್ರೀಕರಣದ ಬೊಪಣ್ಣನು, ಪಾರ್ಶ್ವನಾಥ ಮೂರ್ತಿಯನ್ನು ಕಾಣೂರ್ಗಣದ ಮರುದೇವಿ ಅವ್ವೆಯ ಬಸದಿಗೆ ದಾನ ಮಾಡಿದ್ದನ್ನು ಹಾಗೂ ಈ ಬೊಪ್ಪಣನು ಬಾಲಚಂದ್ರನ ಶಿಷ್ಯನಾಗಿದ್ದುದನ್ನು ಸಾರುತ್ತದೆ. ಈ ಕಾಲದಲ್ಲಿ ಇಡೀ ಕರ್ನಾಟಕ ಮಂಡಳವನ್ನು ತಿಪ್ಪರಾಜನು ಆಳುತ್ತಿದ್ದನು. ಡೋಣಿಕವ್ವೆಯ ಗುಡಿಯ ಕಂಬದ ಶಾಸನದಲ್ಲಿ ಮಡವರಿಬಸಯ್ಯ ಸಡೇಬಾರ ನಿಲ್ಲಿಸಿದ ಉಲ್ಲೇಖವಿದೆ.[೨೦]

ಡೋಣಿಯಲ್ಲಿರುವ ಡೋಣಿಕವ್ವೆ ದೇವಾಲಯವು ಮಹತ್ವದ ಧಾರ್ಮಿಕ ಹಿನ್ನಲೆಯನ್ನು ಹೊಂದಿದೆ. ದೇವಾಲಯದಲ್ಲಿರುವ ಡೋಣಿಕವ್ವೆ ದೇವತೆಯನ್ನು ಸ್ಥಳೀಯರು ತಮ್ಮ ಆರಾಧ್ಯ ದೈವವನ್ನಾಗಿ ಶಕ್ತಿದೇವತೆಯ ರೂಪದಲ್ಲಿ ಪೂಜಿಸುತ್ತಾರೆ. ನಾಲ್ಕು ಅಡಿ ಎತ್ತರದ ಈ ವಿಗ್ರಹವು ದೇವಾಲಯದಲ್ಲಿದ್ದು ಅದು ನಿತ್ಯವೂ ಪೂಜಿಸಲ್ಪಡುತ್ತದೆ. ಇದೊಂದು ಸ್ತ್ರೀದೇವತೆಯಾಗಿದ್ದರೂ ಅದನ್ನು ಪುರುಷರೂಪದಲ್ಲಿ ಅಲಂಕಾರಗೊಳಿಸಿ ಆರಾಧಿಸುತ್ತಾರೆ.

**ಕೊರ್ಲಹಳ್ಳಿ**

ಮುಂಡರಗಿ ತಾಲೂಕಿನಿಂದ ೧೦ ಕಿ.ಮೀ. ದೂರದಲ್ಲಿರುವ ಕೊರ್ಲಹಳ್ಳಿ ಗ್ರಾಮವು ತುಂಗಭದ್ರಾ ತೀರದ ಎಡದಂಡೆಯಲ್ಲಿದೆ. ಮಾಸವಾಡಿ-೧೪೦ ಆಡಳಿತ ವಿಭಾಗದಲ್ಲಿ ಸೇರಿರುವ ಈ ಗ್ರಾಮ ಐತಿಹಾಸಿಕವಾಗಿಯು ಮಹತ್ವವನ್ನು ಹೊಂದಿದೆ. ಇಲ್ಲಿರುವ ತುಂಗಭದ್ರಾನದಿಗೆ ಕಲ್ಲಿನ ಸೇತುವೆಯನ್ನು ಕಟ್ಟಲಾಗಿದೆ. ಬಹುತೇಕವಾಗಿ ವಿಜಯನಗರದ ಅರಸರೇ ಅದನ್ನು ಕಟ್ಟಿಸಿದರೆಂಬ ಪ್ರತೀತಿಯಿದೆ. ಈ ತುಂಗಭದ್ರಾ ನದಿ ದಂಡೆಯಲ್ಲಿ ಕ್ರಿ.ಶ. ೧೦೫೦ರ ತೇದಿಯುಳ್ಳ ಶಾಸನ[೨೧]ವೊಂದು ಕಂಡುಬಂದಿದ್ದು ಅದು ಪ್ರಕಟಗೊಂಡಿದೆ. ಕಲ್ಯಾಣ ಚಾಲುಕ್ಯ ಒಂದನೆಯ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದ ಈ ಶಾಸನದಲ್ಲಿ ಅರಸೀಬೀದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ಅರಸಿ

ಅಕ್ಕಾದೇವಿಯು ದಾನವನ್ನು ನೀಡಿರುವ ಉಲ್ಲೇಖವಿದೆ. ಮುಂಡರಗಿ (ಮಾಸವಾಡಿ-೧೪೦ ಆಡಳಿತ ವಿಭಾಗ) ಪ್ರದೇಶವು ಅರಸಿ ಅಕ್ಕಾದೇವಿಯ ಆಳ್ವಿಕೆಗೆ ಒಳಪಟ್ಟಿತ್ತು. ಈಕೆಯ ಸಾಮಂತ ಅಜ್ಜರಸನು ಕಾಳಾಮುಖ ಮಠದ ಸನ್ಯಾಸಿನಿ ಗಂಗಿಕಬ್ಬೆಗೆ ದಾನಕೊಟ್ಟಿರುವ ಮಾಹಿತಿ ಇದೆ. ಶಾಸನದಲ್ಲಿ ಕೊರಲಹಳ್ಳಿಯನ್ನು ಕೊರ್ಲಹಳ್ಳಿಯೆಂದು ಕರೆಯಲಾಗಿದೆ.

ಕ್ರಿ.ಶ.೧೩೭೯ರ (ಎರಡನೆಯ ಹರಿಹರನ ಕಾಲದ) ತಾಮ್ರಪಟ ಶಾಸನ ಸಹ ಕೊರ್ಲಹಳ್ಳಿಯ ಬಗ್ಗೆ ವಿವರ ನೀಡುತ್ತದೆ. ಜಂಬಳವನ್ನೊಳಗೊಂಡು ಸುತ್ತಲಿನ ಸುಮಾರು ೬೬ ಗ್ರಾಮಗಳು ವಿಜಯನಗರದ ಆಳ್ವಿಕೆಗೆ ಒಳಪಟ್ಟಿದ್ದವು. ಅಲ್ಲದೆ ಅದೇ ಕಾಲಕ್ಕೆ ತುಂಗಭದ್ರಾ ನದಿಗೆ ಅಡ್ಡಲಾಗಿ ಸೇತುವೆ ಕಟ್ಟಿ ಸಂಪರ್ಕ ಸಾಧಿಸಲಾಗಿತ್ತು ಎಂಬ ಪ್ರಮುಖ ಸಂಗತಿ ತಿಳಿದುಬರುತ್ತದೆ. ವಿಜಯನಗರ (ಹಂಪೆ) ಆಡಳಿತದ ಮುಖ್ಯ ಪ್ರದೇಶದ (Core area) ಆಚೆಗೆ ರಾಜ್ಯ ಸಂಪರ್ಕ ಸಾಧಿಸುವ ಮೊದಲಕಟ್ಟೆ ಅಥವಾ ಮದಲಗಟ್ಟೆ ಈ ಸ್ಥಳವಾಗಿತ್ತೆಂಬುದು ಬಹಳ ಮುಖ್ಯವಾದ ವಿಚಾರವಾಗಿದೆ.[೨೨]

**ಪೇಠಾಲೂರು**

ಮುಂಡರಗಿ ತಾಲೂಕಿನ ಐತಿಹಾಸಿಕ ಗ್ರಾಮವಾದ ಪೇಠಾಲೂರನ್ನು ಶಾಸನಗಳಲ್ಲಿ ಮಾಳದಾಲೂರು ಎಂದು ಕರೆಯಲಾಗಿದೆ. ಸಾವಿರ ವರ್ಷಕ್ಕಿಂತಲೂ ಹಳೆಯ ಚರಿತ್ರೆಯನ್ನು ಈ ಗ್ರಾಮ ಹೊಂದಿದೆ. ಇಲ್ಲಿ ನಿರ್ಮಾಣವಾಗಿರುವ ದೇವಾಲಯಗಳು ಈ ಗ್ರಾಮದ ಪುರಾತನ ಇತಿಹಾಸವನ್ನು ಸಾರಿ ಹೇಳುತ್ತವೆ. ಪೇಠಾ-ಆಲೂರಿನ ರಾಜಕೀಯ ಇತಿಹಾಸವು ಕ್ರಿ.ಶ.೧೦೧೦ನೇ ವರ್ಷದಿಂದ ಪ್ರಾರಂಭವಾದುದಕ್ಕೆ ಶಾಸನಧಾರಗಳಿವೆ. ಕ್ರಿ.ಶ. ೧೦೧೦ನೇ ಕಾಲಾವಧಿಯ ಪೂರ್ವದಲ್ಲಿ ರಾಷ್ಟ್ರಕೂಟರು ಕರ್ನಾಟಕದಲ್ಲಿ ಪ್ರಬಲರಾಗಿದ್ದು ಅವರು ಕನ್ನಡ ನಾಡಿನಲ್ಲಿ ತಮ್ಮದೇ ಆದ ಆಳ್ವಿಕೆಯನ್ನು ನಡೆಸಿದರು. ಆದರೆ ಇದರ ಬಗ್ಗೆ ಸ್ಪಷ್ಟವಾದ ಆಧಾರಗಳ ಕೊರತೆ ಇದೆ. ಕ್ರಿ.ಶ. ೧೦೧೦ ರಿಂದ ೧೨ನೇ ಶತಮಾನದವರೆಗೆ ಈ ಭಾಗದಲ್ಲಿ ಕಲ್ಯಾಣ ಚಾಲುಕ್ಯರ ಆಡಳಿತವಿತ್ತು. ಅವರ ಪೈಕಿ ಪ್ರಮುಖ ದೊರೆಗಳಾದ ಐದನೆಯ ವಿಕ್ರಮಾದಿತ್ಯ, ಎರಡನೆಯ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ ಮತ್ತು ಅವರ ಸಾಮಂತ ಅರಸರಾದ ಇರಿವರ್ ನೊಳಂಬಾಜಿರಾಜ, ನೂಕ್‌ಮಡಿ ತೈಲಶಾಚರಸ ಮತ್ತು ವಾಸುದೇವಯ್ಯ ಇವರುಗಳು ಆಲೂರಿನಲ್ಲಿ ಆಡಳಿತ ನಡೆಸುತ್ತಿದ್ದರು. ಇದರ ಸ್ಪಷ್ಟ ದಾಖಲೆಗಳು ಕಂಡುಬರುತ್ತವೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪೇಠಾಲೂರು ಗ್ರಾಮವು ಅವರ ಆಡಳಿತ ಪ್ರದೇಶವಾಗಿದ್ದ ಮಾಸವಾಡಿ-೧೪೦ಕ್ಕೆ ಸೇರಿದ ಒಂದು ಮಹಾ ಅಗ್ರಹಾರವಾಗಿತ್ತೆಂದು ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯರ ಒಂದು ಶಾಸನದಲ್ಲಿ ನೊಳಂಬವಾಡಿ-೩೨೦೦೦, ಕೋಗಳಿ-೫೦೦, ಬಲುಕುಂಡೆ-೫೦೦, ಮತ್ತು ಕುಕ್ಕನೂರು-೩೦ ಹಾಗೂ ಐದು ಶಹರಗಳನ್ನು ಒಳಗೊಂಡ ಮಾಸವಾಡಿಗಳ ಬಗ್ಗೆ ವಿವರಗಳು ಕಂಡುಬರುತ್ತವೆ.

ನೊಳಂಬವಾಡಿ-೩೨೦೦೦ ಇದು ಬಳ್ಳಾರಿಯ ಪ್ರದೇಶಕ್ಕೆ ಸೇರಿತ್ತು. ಕೋಗಳಿ-೫೦೦ ಮತ್ತು ಮಾಸವಾಡಿಗಳು ಪಶ್ಚಿಮ ಘಟ್ಟದಲ್ಲಿ ಇದ್ದವೆಂದು ತಿಳಿದುಬರುತ್ತದೆ. ಮಹಾ ಅಗ್ರಹಾರವಾಗಿದ್ದ ಈ ಪ್ರದೇಶವನ್ನು ಮಹಾಮಾತ್ಯ ಸೂಲಗಿಯ ಪೆರ್ಮಾಡಿಯ ಅರಸನು ಆಳುತ್ತಿದ್ದನು. ಇವನು ಆರನೆಯ ವಿಕ್ರಮಾದಿತ್ಯ ಅರಸನ ಸಾಮಂತನಾಗಿ ಈ ಪ್ರದೇಶದ ರಾಜ್ಯಭಾರವನ್ನು ಸಾಗಿಸುತ್ತಿದ್ದನು.

ಕಲ್ಯಾಣ ಚಾಲುಕ್ಯರ ಪ್ರಮುಖ ಅರಸನಾದ ಐದನೆಯ ವಿಕ್ರಮಾದಿತ್ಯ, ಎರಡನೆಯ ಸೋಮೇಶ್ವರ ಮತ್ತು ಆರನೆಯ ವಿಕ್ರಮಾದಿತ್ಯ ಅರಸರ ಸಾಮಂತರೆಂದು ಇರಿವರ್ ನೊಳಂಬಾಡಿ ರಾಜ, ನೂರ್ಮಡಿ ತೈಲ, ಬ್ಯಾಶರಸ, ವಾಸುದೇವಯ್ಯಾ ಮಹಾದಂಡನಾಯಕ ಮತ್ತು ಸುರಿಗೆಯ ಮೆರ್ಮಾಡಿ ಅರಸ ಮೊದಲಾದವರು ಮಹಾಅಗ್ರಹಾರವೆಂದು ಅನಿಸಿಕೊಂಡಿದ್ದ 'ಮಾಳದಾಲೂರ'ನ್ನು (ಈಗಿನ ಪೇಠಾಲೂರು) ಅರಸನ ಆಜ್ಞೆಯ ಮೇರೆಗೆ ಆಳುತ್ತಿದ್ದರು. ಈ ವಿಷಯವನ್ನು ಪೇಠಾಲೂರಿನ ನಾಗನಾಥೇಶ್ವರ ದೇವಾಲಯದಲ್ಲಿ ದೊರೆತ ಶಾಸನವು ತಿಳಿಸುತ್ತದೆ. ಸುರಿಗೆಯ ಮಹಾದೇವಯ್ಯನ ಮಗ ಮತ್ತು ಮುದ್ದಿಯಕ್ಕ ಇವರುಗಳು ಸಹ ಮಾಳದಾಲೂರಿನ ಆಡಳಿತವನ್ನು ನಡೆಸುತ್ತಿದ್ದರೆಂದು ತಿಳಿದುಬರುತ್ತದೆ.[೨೩] ಅನಂತಶಯನ, ನೆಟ್ಟಕಲ್ಲ ಭರಮಪ್ಪ, ದ್ಯಾಮವ್ವ, ಹನುಮಂತ, ಕರೆವ್ವ, ಹೊನ್ನತ್ತೆವ್ವ ದೇವಾಲಯಗಳು ಸಹ ಇಲ್ಲಿ ಕಂಡುಬರುತ್ತವೆ.

**ಬಿದರಳ್ಳಿ**

ಮುಂಡರಗಿ ತಾಲೂಕಿನ ಬಿದರಳ್ಳಿಯು ಐತಿಹಾಸಿಕ ಮಹತ್ವವನ್ನು ಹೊಂದಿರುವ ಚಿಕ್ಕಗ್ರಾಮ. ಇದನ್ನು ಹಿಂದೆ ಬಿರ್ದುವಳ್ಳಿ ಎಂದು ಕರೆಯುತ್ತಿದ್ದರು. ತೀರ್ಥರಾಜವೆಂದು ಹೆಸರಾದ ಈ ಪ್ರಮುಖ ಕ್ಷೇತ್ರ ತುಂಗಭದ್ರಾ ತೀರದಲ್ಲಿ ಪುರಾತನ ಕಾಲದಿಂದಲೂ ಶೈವ-ವೈಷ್ಣವ ಶಾಕ್ತ ಸಂಪ್ರದಾಯಗಳ ಸಂಗಮ ಸ್ಥಾನವಾಗಿತ್ತು. ಪೌರಾಣಿಕ ಹಿನ್ನಲೆಯನ್ನು ಹೊಂದಿರುವ ಈ ಕ್ಷೇತ್ರವು ಶ್ರೀಸ್ಕಂದಪುರಾಣದ ಸಹ್ಯಾದ್ರಿ ಖಂಡದಲ್ಲಿ ವೇಣುಪುರಿ ಮಹಾತ್ಮೆ ಎಂದು ವಿಸ್ತೃತವಾಗಿ ವರ್ಣಿಸಲ್ಪಟ್ಟಿದೆ. ವೇಣುಪುರಿ, ವೇಣುಪಲ್ಲಿ ಎಂದು ಸಂಭೋಧಿಸಲಾದ ಈ ಗ್ರಾಮವು ವಿಠಲಾಪುರ ರಂಗಾಪುರ ಎಂಬ ಗ್ರಾಮಗಳನ್ನು ಒಳಗೊಂಡಿದೆ.

ಕ್ರಿ.ಶ. ೧೦೫೨ರ ಶಾಸನವು ಸೆಟ್ಟಿಯೊಬ್ಬ ಇಲ್ಲಿರುವ ಸೋಮನಾಥ ದೇವಾಲಯಕ್ಕೆ ದಾನಮಾಡಿದ್ದನ್ನು ಉಲ್ಲೇಖಿಸಿದೆ. ಕ್ರಿ.ಶ. ೧೬೮೦ರ ಶಾಸನದಲ್ಲಿ ಬಿದರಳ್ಳಿಗೆ 'ತಿಗುಲರಾಜಯ ಸಮುದ್ರ' ಎಂದು ನಾಮಕರಣ ಮಾಡಿದ ವಿಷಯ ತಿಳಿದುಬರುತ್ತದೆ. ಈ ಗ್ರಾಮದ ಕ್ಷೇತ್ರದೇವತೆಗಳಲ್ಲಿ ಶ್ರೀರೇಣುಕಾಂಬಾ, ಸೋಮೇಶ್ವರ, ಅಶ್ವತ್ಥನಾರಾಯಣ, ಮಲ್ಲಿಕಾರ್ಜುನ, ವೇಣುಗೋಪಾಲ, ಜಂಬುಕೇಶ್ವರ ಮುಂತಾದ ದೇವಾಲಯಗಳು ಪ್ರಮುಖವಾಗಿವೆ. ಶ್ರೀಸೋಮೇಶ್ವರನಲ್ಲಿ ಕಾಶೀ ವಿಶ್ವನಾಥನು ಸನ್ನಿಹಿತನಾಗಿದ್ದಾನೆ ಎಂಬ ಶ್ರದ್ಧೆಯ ಮೂಲಕ ಈ ಬಿದರಹಳ್ಳಿಯನ್ನು ದಕ್ಷಿಣಕಾಶಿ ಎಂದು ಪುರಾಣದಲ್ಲಿ ಸಾರಲಾಗಿದೆ. ಈ ಗ್ರಾಮದ ಅಂಚಿನಲ್ಲಿ ವೇಣುಗೋಪಾಲ ಸ್ವಾಮಿ ಗುಡಿಯಿದ್ದು, ಈ ಮೂರ್ತಿ ಕರಿಶಿಲೆಯಲ್ಲಿ ನಯನಮನೋಹರವಾಗಿ ರಚಿಸಲಾಗಿದೆ.[೨೪]

**ಗುಮ್ಮಗೋಳ**

ಮುಂಡರಗಿ ತಾಲೂಕಿನ ಚಿಕ್ಕಗ್ರಾಮವಾದ ಗುಮ್ಮಗೋಳವು ಕೆಲವು ವೈಶಿಷ್ಟತೆಗಳಿಂದ ಹೆಸರುವಾಸಿಯಾದ ಗ್ರಾಮ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಪಂಚಗಣಾಧೀಶ್ವರೆಂದು ಕರೆಯಲಾಗುವ ಕೊಟ್ಟೂರಿನ ಕೊಟ್ಟೂರೇಶ್ವರ, ಮದ್ದಾನಸ್ವಾಮಿ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಹರಪನಹಳ್ಳಿಯ ಕೋಟೇಶ್ವರ ಹಾಗೂ ಕೂಲಹಳ್ಳಿಯ ಗೋಣಿಬಸವೇಶ್ವರರು ಒಬ್ಬರು. ಇಂತಹ ಮಹಾಪುರುಷನಿರುವ ಮಠವು ಗುಮ್ಮಗೋಳದಲ್ಲಿ ಕಂಡುಬರುತ್ತದೆ. ಅದ್ಭುತ ಸುಂದರವಾದ ವಾಸ್ತು ರಚನೆಯನ್ನು ಹೊಂದಿರುವ ಗೋಣಿಬಸಪ್ಪನ ಮಠ ನೋಡುಗರ ಆಕರ್ಷಣೆಯ ಸ್ಮಾರಕವಾಗಿದೆ. ಇದು ಸುತ್ತಲಿನ ಪ್ರದೇಶದಲ್ಲಿರುವ ಅನೇಕ ಜನಾಂಗಗಳಿಗೆ ಮನೆ ದೇವರು ಹಾಗೂ ಕುಲದೇವರಾಗಿ ಪ್ರಾಮುಖ್ಯತೆ ಪಡೆದಿದೆ.

ಅಧ್ಯಯನಾರ್ಹ ಸಂಗತಿಯೆಂದರೆ ಬಹುಶಃ ಈ ಗುಡಿಯ ಸಂಬಂಧದಿಂದಾಗಿ ಈ ಗ್ರಾಮಕ್ಕೆ ಗುಮ್ಮಗೋಳ ಹೆಸರು ಬಂದಿರುವ ಸಾಧ್ಯತೆ ಇದೆ. ವಿವರವಾಗಿ ಹೇಳುವುದಾದರೆ ಈ ದೇವಾಲಯದ ಶಿಖರ ಗುಮ್ಮಟ (ಗೋಳ)ವು ದೊಡ್ಡದಾಗಿದ್ದು ಬಹುದೂರದವರೆಗೆ ಕಂಡುಬರುತ್ತದೆ. ಗುಮ್ಮಟಾಕಾರದ (ದುಂಡಾಗಿರುವ) ಗೋಳ (ಶಿಖರ)ದಿಂದ ಈ ಗ್ರಾಮಕ್ಕೆ ಗುಮ್ಮಗೋಳ ಎಂಬ ಗ್ರಾಮನಾಮ ಬಂದಿರುವ ಸಾಧ್ಯತೆಗಳಿವೆ. ಈ ಗ್ರಾಮದ ಪರಿಸರದಲ್ಲಿ ಕೆಲ ವೀರಗಲ್ಲು ಶಿಲ್ಪಗಳು ಕಂಡುಬರುತ್ತವೆ.

**೩.೨. ದೇವಾಲಯಗಳು**

ದೇವಾಲಯಗಳು ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಪ್ರಮುಖಪಾತ್ರವಹಿಸುತ್ತವೆ. ಅವು ಚರಿತ್ರೆಯ ರಚನೆಯಲ್ಲಿ ಬಹುಮುಖ್ಯ ಆಕರಗಳಾಗಿ ಬಳಕೆಯಾಗಲ್ಪಡುತ್ತವೆ. ಅವುಗಳಲ್ಲಿರುವ ಅನೇಕ ಶಿಲ್ಪ ರಚನಾಕೃತಿಗಳು ಕಲೆಯ ಪ್ರಮುಖ ಭಾಗವೇ ಆಗಿವೆ. ಇಲ್ಲಿ ಕಲೆಯೆಂಬುದು ಮಾನವನ ಸೃಜನಶೀಲತೆಯಿಂದ ರಚನೆಯಾಗುವಂತಹುದು. ಇದು ವಿಕಸನಗೊಳ್ಳುತ್ತಾ ದೃಶ್ಯ ಹಾಗೂ ಶ್ರವಣ ಮಾಧ್ಯಮಗಳೆಂಬ ಎರಡು ರೂಪಗಳನ್ನು ಪಡೆಯಿತು. ಇವುಗಳೇ ಕಲೆಯ ಎರಡು ವಿಭಾಗಗಳಾಗಿವೆ. ದೇವಾಲಯಗಳನ್ನು ನಿರ್ಮಿಸುವ ಅಂತಿಮ ಫಲಿತಾಂಶವೆಂದರೆ ದ್ವಿಗುಣಗೊಳಿಸುವುದು. ದೃಶ್ಯ ಮಾಧ್ಯಮದಲ್ಲಿ ಬರುವ ದೇವಾಲಯ ಹಾಗೂ ಮೂರ್ತಿಶಿಲ್ಪಗಳು ಆಯಾ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯ ಬರವಣಿಗೆಯಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ಆದ್ದರಿಂದಲೇ ದೇವಾಲಯಗಳನ್ನು ಆಯಾಕಾಲದ ವರ್ತಮಾನವನ್ನು ಸಾದರಪಡಿಸುವ ಮಾಧ್ಯಮಗಳೆಂದು ಪರಿಗಣಿಸುತ್ತಾರೆ.

ಸಂಸ್ಕೃತಿಯ ಅವಿಭಾಜ್ಯ ಅಂಗವೆನಿಸಿದ ದೇವಾಲಯಗಳು ಸಮಾಜದ ವಿವಿಧ ಉದ್ದೇಶಗಳ ನೆರವಾಗಿನಿಂತು ಒಂದಲ್ಲ ಒಂದು ರೀತಿಯಲ್ಲಿ ಸಮಾಜದ ಎಲ್ಲ ಸ್ತರದ ವ್ಯಕ್ತಿಗಳಿಗೆ ಮನ್ನಣೆ ನೀಡಿದವು. ಹೀಗಾಗಿ ದೇವಾಲಯಗಳು ಸಮಾಜದೊಂದಿಗೆ ಹಾಸುಹೊಕ್ಕಾಗಿ ಜನ ಜೀವನದ ಕೇಂದ್ರಸ್ಥಾನ ಎನಿಸಿಕೊಂಡವು. ಸಂಗೀತ, ನೃತ್ಯ, ಕಲೆ, ವಾಸ್ತುಶಿಲ್ಪ ಮುಂತಾದ ಕಲೆಗಳ ಉನ್ನತಿಗೆ

ಪ್ರೇರಕವಾದ ದೇವಾಲಯಗಳು ಪ್ರಮುಖ ವಿದ್ಯಾಕೇಂದ್ರಗಳಾಗಿಯೂ ಹೆಸರುವಾಸಿಯಾದವು. ಈ ಹಿನ್ನಲೆಯಲ್ಲಿ ದೇವಾಲಯ ನಿರ್ಮಾಣವು ಇಡೀ ಸಮಾಜದ ಧಾರ್ಮಿಕ ಶ್ರದ್ಧೆಯ ಪ್ರತೀಕವೆನಿಸಿತು. ಆಯಾಯ ಧಾರ್ಮಿಕ ಮತಗಳಿಗೆ ಅನುಗುಣವಾಗಿ ವಿಭಿನ್ನಸ್ಥಳ ಸ್ಮಾರಕಗಳು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟವು. ಅಂದರೆ ಹಿಂದುಗಳು ದೇವಾಲಯ ಎಂದು ಕರೆದರೆ, ಜೈನರು 'ಬಸದಿ' ಎಂದೂ 'ಬೌದ್ಧರು' ಚೈತ್ಯವೆಂದು ಕರೆದರು.

ಈ ಹಿನ್ನಲೆಯಲ್ಲಿ ಇತಿಹಾಸವನ್ನು ರಚಿಸುವ ಆಕರಗಳಲ್ಲಿ ದೇವಾಲಯಗಳು ಬಹುಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಅವುಗಳ ಅಧ್ಯಯನದಿಂದ ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪ, ರಾಜಾಶ್ರಯ, ದಾನದತ್ತಿ, ಧರ್ಮ, ಸಾಂಸ್ಕೃತಿಕವಾದ ಹಬ್ಬ-ಹರಿದಿನಗಳು, ಜಾತ್ರೆ-ಉತ್ಸವಗಳು, ಸಂಗೀತ, ಸಾಹಿತ್ಯ, ಶಿಕ್ಷಣ ಹಾಗೂ ನ್ಯಾಯಿಕ ಅಂಶಗಳನ್ನು ತಿಳಿಯಲು ಸಹಾಯಕಾರಿಯಾಗಿದೆ. ಅಧ್ಯಯನ ಕ್ಷೇತ್ರವಾದ ಮುಂಡರಗಿ ಪರಿಸರದಲ್ಲಿ ವಿಭಿನ್ನ ಬಗೆಯ, ವಿವಿಧ ವಿಶಿಷ್ಟ ಲಕ್ಷಣಗಳನ್ನು ಒಳಗೊಂಡ ದೇವಾಲಯಗಳು ಕಂಡುಬರುತ್ತವೆ. ಅವುಗಳ ಸ್ಥಾಪನೆಗೆ, ನಿರ್ಮಿತಿಗೆ ಕಾರಣಿಕರ್ತರೆಂದರೆ ಅಲ್ಲಿ ಆಳ್ವಿಕೆ ಮಾಡಿದ ಅರಸುಮನೆತನಗಳು, ಅವರಲ್ಲಿ ಮುಖ್ಯವಾಗಿ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲ್ಯಾಣದ ಕಲಚೂರಿಗಳು, ಹೊಯ್ಸಳರು, ಸೇವುಣರು (ಯಾದವರು) ವಿಜಯನಗರ ಅರಸರು ಮತ್ತು ಸಾಮಂತರು ಬಹುಮುಖ್ಯರಾಗಿದ್ದಾರೆ. ಇವರಿಂದ ನಿರ್ಮಾಣವಾಗಿರುವ ಅನೇಕ ದೇವಾಲಯಗಳು ವಿಭಿನ್ನ ಧಾರ್ಮಿಕ ಹಿನ್ನಲೆಯನ್ನು ಹೊಂದಿವೆ. ಅವುಗಳಲ್ಲಿ ಶೈವ, ವೈಷ್ಣವ, ಜೈನ, ಮತ್ತು ಬೌದ್ಧ ಧರ್ಮಗಳಿಗೆ ಸಂಬಂಧಿಸಿದವುಗಳಾಗಿವೆ.

ಸಾಂಸ್ಕೃತಿಕ ಕೇಂದ್ರಗಳಾಗಿ ಮಹತ್ವ ಪಡೆದಿರುವಂತಹ ಇಲ್ಲಿಯ ದೇವಾಲಯಗಳ ನಿರ್ಮಾಣದ ಬಗ್ಗೆ ಕೆಲ ಶಾಸನಗಳು ಮಾಹಿತಿ ನೀಡುತ್ತವೆ. ಆದರೆ ದೇವಾಲಯ ಹೆಸರನ್ನು ಸೂಚಿಸುವ ಶಾಸನಗಳು ಕಡಿಮೆ ಸಂಖ್ಯೆಯಲ್ಲಿ ಕಂಡುಬರುತ್ತವೆ. ಲಭ್ಯವಾದ ಶಾಸನಗಳಲ್ಲಿ ದೇವಾಲಯ ದೇವಾಲಯದ ಕೆಲವು ಸಾಮಾನ್ಯ ಲಕ್ಷಣಗಳನ್ನು ಅವಲೋಕಿಸಿದಾಗ (ಡಂಬಳದ ದೊಡ್ಡಬಸಪ್ಪ ದೇವಾಲಯದ) ಅವುಗಳು ಅಲಂಕಾರಿಕ ವೇಸರ ಶೈಲಿಯ ಶಿಖರಗಳನ್ನು ಹೊಂದಿವೆ. ಭಿತ್ತಿಯ ಅಷ್ಟದಿಕ್ಕುಗಳಲ್ಲಿ ಅಷ್ಟದಿಕ್ಪಾಲಕರ ಮೂರ್ತಿಶಿಲ್ಪಗಳನ್ನು ಹೊಂದಿದ ದೇವಕೋಷ್ಟಕಗಳನ್ನು, ಇದೇ ಶೈಲಿಯ ಶಿಖರವನ್ನು ಹೊತ್ತ ಅರ್ಧಗಂಭಗಳನ್ನು ಕೆತ್ತಲಾಗಿದೆ.

ಕೆಲವು ದೇವಾಲಯಗಳ ವಾಸ್ತು ನಿರ್ಮಿತಿಯಲ್ಲಿ ಕಪೋತದ ಭಾಗವು ಮಹತ್ವ ಪಡೆದುಕೊಂಡಿದೆ. ಉದಾಹರಣೆಗೆ ಡಂಬಳದ ದೊಡ್ಡಬಸಪ್ಪ ದೇವಾಲಯದ ದೇವಕೋಷ್ಟಗಳ ಕಪೋತಗಳು ಅದರ ಸೌಂದರ್ಯವನ್ನು ಹೆಚ್ಚಿಸಿವೆ. ಹಾಗೆಯೇ ದೇವಾಲಯದ ಶಿಖರದ ಶೈಲಿಯು ಸಹ ವಿಶಿಷ್ಟ ರಚನೆಯಿಂದ ಕೂಡಿದೆ. ಅದು ನಕ್ಷತ್ರಾಕಾರದ ಶಿಖರ, ದ್ರಾವಿಡ ಮತ್ತು ನಾಗರಶೈಲಿಯ ಮಿಶ್ರಣದಿಂದ ಕೂಡಿದ ವೇಸರಶೈಲಿಗೆ ಸಂಬಂಧಿಸಿರುವ ಸಾಧ್ಯತೆ ಕಂಡುಬರುವುದು.

ಇಲ್ಲಿಯ ಅನೇಕ ದೇವಾಲಯಗಳ ದ್ವಾರಗಳನ್ನು ಅವಲೋಕಿಸಿದಾಗ ದ್ವಾರದ ಲಂಬ, ತಳರೇಖೆಗಳು ಗೋಡೆಯ ರೇಖೆಗಳೊಡನೆ ಸುಲಭವಾಗಿ ಮೇಳೈಸುವಂತಿದೆ. ದ್ವಾರಶಾಖೆಗಳು ಒಂದರ ಮೇಲೊಂದರಂತೆ ಒಂದರ ಬದಿಯಲ್ಲಿ ಮತ್ತೊಂದನ್ನು ಇಟ್ಟಂತೆ ತೋರುತ್ತವೆ. ದ್ವಾರದ ಬುಡದಲ್ಲಿ ಅಲಂಕಾರಿಕವಾದ ಚಂದ್ರಶಿಲೆಗಳು ಕಂಡುಬರುತ್ತವೆ. ಕೆಲವೊಮ್ಮೆ ಈ ಶಿಲೆಯ ಮೇಲೆಲ್ಲ ಸುಂದರ ಕೆತ್ತನೆಗಳಿರುತ್ತವೆ. ಉದಾಹರಣೆಗೆ ಡಂಬಳದ ದೊಡ್ಡಬಸಪ್ಪನ ದೇವಾಲಯವನ್ನಿಲ್ಲಿ ಹೆಸರಿಸಬಹುದು. ದೇವಾಲಯದ ಭಾಗಗಳ್ಲೊಂದಾದ ಜಾಲಾಂದ್ರಗಳು ಸಹ ಇಲ್ಲಿಯ ದೇವಾಲಯಗಳ ದ್ವಾರಗಳ ಎರಡು ಬದಿಗೆ ಹೆಚ್ಚಾಗಿ ಅಳವಡಿಸಿದ್ದನ್ನು ಕಾಣಬಹುದಾಗಿದೆ. ಇದು ಪ್ರವೇಶದ್ವಾರ, ಸುಖನಾಶಿ ಮತ್ತು ಗರ್ಭಗೃಹಗಳ ದ್ವಾರಗಳ ಇಕ್ಕೆಲಗಳಲ್ಲಿವೆ. ಇನ್ನೂ ಕಂಬಗಳ ರಚನೆಯು ವಿಶಿಷ್ಟವಾಗಿದ್ದು ಕಂಬಗಳ ಕೆಳಭಾಗ ಚೌಕಾಗಿದ್ದು ಕಾಂಡಭಾಗವು ತಲೆಕೆಳಗಾದ ಗಂಟೆಯಾಕಾರದಲ್ಲಿರುತ್ತದೆ. ಇದರ ಮೇಲ್ಭಾಗದಲ್ಲಿ ದುಂಡಾದ ಮುಚ್ಚಳಿಗೆಗಳು ಇರುತ್ತವೆ. ಘಂಟೆಯಾಕಾರದ ಕಾಂಡಾದ ಮೇಲೆ ಮಣಿಹಾರ, ಲತಾಸುರುಳಿಗಳನ್ನು ಕೆತ್ತಿರುವುದನ್ನು ಕಾಣುತ್ತೇವೆ. ಗರ್ಭಗೃಹ, ನವರಂಗ, ಮುಖಮಂಟಪದಲ್ಲಿ ರಚನೆಯಾಗಿರುವ ಭುವನೇಶ್ವರಿಗಳು ಗುಮ್ಮಟಾಕಾರ ಅಥವಾ ಮಟ್ಟಸಮಾನವಾಗಿವೆ. ದ್ವಾರದ ಇಕ್ಕೆಲಗಳಲ್ಲಿ ಇಲ್ಲವೇ ಪ್ರತ್ಯೇಕ ಸ್ತಂಭಗಳ ಮೇಲೆ ನಿರ್ಮಿಸಲಾಗಿರುವ ಮಕರತೋರಣಗಳು ವಿಶಿಷ್ಟವಾಗಿವೆ. ಜೊತೆಗೆ ಕಕ್ಷಾಸನ, ದೇವಕೋಷ್ಟದ ರಚನೆಗಳು ಈ ಪರಿಸರದ ದೇವಾಲಯಗಳಲ್ಲಿ ಮನೋಹರವಾಗಿ ಚಿತ್ರಿತವಾಗಿವೆ.

ಕಲ್ಯಾಣ ಚಾಲುಕ್ಯರಿಂದ ನಿರ್ಮಾಣವಾದ ಈ ಪರಿಸರದಲ್ಲಿಯ ದೇವಾಲಯಗಳು ಇಲ್ಲಿ ಹೊಸ ಚೈತನ್ಯವನ್ನು ಪಡೆದವು. ಸಾಮಾನ್ಯವಾಗಿ ಇಲ್ಲಿರುವ ದೇವಾಲಯಗಳಿಗೆ ಅದಿಷ್ಠಾನವಿದ್ದು, ಅದರಲ್ಲಿ ಉಪಾನ, ಗಳ, ಕುಮುದ ಮತ್ತು ಜಗತಿ ಭಾಗಗಳಿವೆ. ಭಿತ್ತಿಯು ಸರಳ ರಚನೆಯಿಂದ ಕೂಡಿದ್ದು, ತಲಗಳುಳ್ಳ ಶಿಖರ ಭಾಗವನ್ನು ಕೆಲವೊಂದು ದೇವಾಲಯಗಳಲ್ಲಿ ಮಾತ್ರ ಕಾಣುತ್ತೇವೆ. ಉದಾಹರಣೆಗೆ ಡಂಬಳ ಗ್ರಾಮದಲ್ಲಿ ತಲಗಳುಳ್ಳ ಶಿಖರ ಭಾಗಗಳನ್ನು ಕಾಣುತ್ತೇವೆ. ಕಲ್ಯಾಣ ಚಾಲುಕ್ಯರ ಉತ್ತರಾಧಿಕಾರಿಗಳಾದ ಕಲ್ಯಾಣ ಕಲಚೂರಿಗಳು ಸಹ ಇದೇ ಚಾಲುಕ್ಯ ಶೈಲಿಯನ್ನು ಮುಂದುವರೆಸಿ ಬೆಳೆಸಿದರು. ಅಷ್ಟೇ ಅಲ್ಲದೇ ಹಲವಾರು ಚಿಕ್ಕಪುಟ್ಟ ಮನೆತನದವರು ಸಹ ಈ ಕಲ್ಯಾಣ ಚಾಲುಕ್ಯರ ಶೈಲಿಯನ್ನೇ ಮುಂದುವರೆಸಿದರು.

ಕಲ್ಯಾಣದ ಚಾಲುಕ್ಯರ ಶೈಲಿಯಿಂದ ಪ್ರಭಾವಿತರಾಗಿ ದೇವಾಲಯಗಳನ್ನು ಕಟ್ಟುವುದರ ಮೂಲಕ ಹಾಗೂ ತಮ್ಮನ್ನು ಸ್ಥಳೀಯರ ಮಧ್ಯ ಶಾಶ್ವತವಾಗಿ ಗುರುತಿಸಿಕೊಳ್ಳುವ ಪ್ರಯತ್ನವಾಗಿ ಸಾಮಂತ ಅಧಿಕಾರವರ್ಗ ತಮ್ಮ ಹೆಸರಿನಲ್ಲಿ ವಿಶಿಷ್ಟವಾಗಿರುವ ಅನೇಕ ದೇವಾಲಯಗಳನ್ನು ಕಟ್ಟಿರುವುದು ಹಲವಾರು ಆಧಾರಗಳಿಂದ ತಿಳಿದುಬರುವುದು. ಅಂತಹ ದೇವಾಲಯಗಳು ಸ್ಥಳೀಯ ಹಾಗೂ ಮುಖ್ಯವಾಗಿ ವೇಸರ ಶೈಲಿಯ ಎರಡು ಮಿಶ್ರಣಗಳನ್ನು ಮೈಗೂಡಿಸಿಕೊಂಡು ಬೆಳೆದುಬಂದಿವೆ.

ಅಂತಹ ಮಾದರಿಯ ದೇವಾಲಯಗಳನ್ನು ಮುಂಡರಗಿ ತಾಲೂಕಿನ ಬರದೂರ ಗ್ರಾಮದಲ್ಲಿ ಗಮನಿಸಬಹುದು. ಹೀಗೆ ಅನೇಕ ಧಾರ್ಮಿಕತೆಗೆ ಸಂಬಂಧಿಸಿದ ದೇವಾಲಯಗಳನ್ನು ಈ ಮುಂದಿನಂತೆ ವಿವರಿಸುವ ಪ್ರಯತ್ನ ಮಾಡಲಾಗಿದೆ.

**ಶೈವ ದೇವಾಲಯಗಳು**

ಶೈವ ದೇವಾಲಯಗಳೇ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಮೇವುಂಡಿಯ ದಿಡಿಗೇಶ್ವರ, ಬಿದರಳ್ಳಿಯ ಸೋಮನಾಥ, ನಾಗರಳ್ಳಿಯ ಪಂಚಲಿಂಗ, ಬರದೂರಿನ ಭರತೇಶ್ವರ, ಆಲೂರಿನ ನಾಗನಾಥೇಶ್ವರ, ಡೋಣಿಯ ಸಿದ್ಧಲಿಂಗೇಶ್ವರ, ಶಿರೂರಿನ ಮಹಾಬಲೇಶ್ವರ, ಹಿರೇವಡ್ಡಟ್ಟಿಯ ಕಲ್ಮೇಶ್ವರ, ಹಾಳಮಲ್ಲಾಪುರದ ರಾಮಲಿಂಗೇಶ್ವರ, ಚಿಕ್ಕವಡ್ಡಟ್ಟಿಯ ಬಾಳೇಶ್ವರ ದೇವಾಲಯ ಇನ್ನು ಮುಂತಾದ ಸಣ್ಣ ಪುಟ್ಟ ಶೈವ ದೇವಾಲಯಗಳು ಮುಂಡರಗಿ ಪರಿಸರದಲ್ಲಿ ಕಂಡುಬರುತ್ತವೆ.

**ಡಂಬಳದ ದೊಡ್ಡಬಸಪ್ಪ ದೇವಾಲಯ**

'ಡಂಬಳ' ಗ್ರಾಮದಲ್ಲಿ ಶಿಲ್ಪಕಲೆಯ ಸ್ಮಾರಕಗಳು ಹೆಚ್ಚಾಗಿ ಕಂಡುಬರುತ್ತವೆ. ಮುಂಡರಗಿಯಿಂದ ಹದಿನೆಂಟು ಕಿ.ಮೀ. ದೂರದಲ್ಲಿರುವ ಇಲ್ಲಿ ಕಲಾವೈಭವದಿಂದ ಕಂಗೊಳಿಸುತ್ತಿರುವ 'ದೊಡ್ಡಬಸಪ್ಪ ದೇವಾಲಯ' ಕೆತ್ತನೆಯ ಕುಸುರಿ ಕೆಲಸದಿಂದ ಗಮನ ಸೆಳೆಯುತ್ತದೆ. ರಾಷ್ಟ್ರೀಯ ಮಹತ್ವದ ಸ್ಮಾರಕವೆಂದು ಗುರುತಿಸಿರುವ ಈ ದೇಗುಲದಲ್ಲಿಯ ಶಿಲ್ಪ ಕಲಾಕೃತಿಗಳು ಮನಮೋಹಕವಾಗಿದ್ದು, ಸೂಕ್ಷ್ಮಕೆತ್ತನೆಯ ಸುಂದರ ಚಿತ್ತಾರಗಳು ಕಣ್ಮನ ಸೂರೆಗೊಳ್ಳುವಂತಿವೆ. ಶಾಸನದಲ್ಲಿ 'ಧರ್ಮವೊಳಲ್' ಹಾಗೂ 'ಧರ್ಮಪುರ' ಎಂದು ಕರೆಯಿಸಿಕೊಂಡಿರುವ ಈ ಊರು ನಾಡಿನ ಪ್ರಮುಖ ಬೌದ್ಧಕೇಂದ್ರಗಳಲ್ಲಿ ಒಂದಾಗಿತ್ತೆಂದು ಇತಿಹಾಸ ತಜ್ಞರು ಅಭಿಪ್ರಾಯಪಟ್ಟಿದ್ದಾರೆ.[೨೫]

ಕಲ್ಯಾಣದ ಚಾಲುಕ್ಯರು ನಿರ್ಮಿಸಿರುವ ಪ್ರಮುಖ ದೇವಾಲಯಗಳಲ್ಲಿ ಡಂಬಳದ ದೊಡ್ಡಬಸಪ್ಪನ ದೇವಾಲಯವು ಒಂದು. ಗ್ರಾಮದ ವಾಯುವ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿರುವ ಈ ದೇವಾಲಯವು ಕ್ರಿ.ಶ.೧೧-೧೨ನೇ ಶತಮಾನದಲ್ಲಿ ಆಳ್ವಿಕೆ ಮಾಡಿದ ಕಲ್ಯಾಣ ಚಾಲುಕ್ಯರು ತುಂಗಭದ್ರಾ ನದಿ ಪರಿಸರದಲ್ಲಿ ನೂರಾರು ದೇವಾಲಯಗಳು ನಿರ್ಮಾಣವಾಗುವುದಕ್ಕೆ ಕಾರಣರಾಗಿದ್ದಾರೆ. ಅಂಥ ಪ್ರಮುಖ ಸ್ಮಾರಕಗಳಲ್ಲಿ ವಿಶೇಷವಾಗಿ ಪರಿಗಣಿಸಲ್ಪಡುವ ದೊಡ್ಡಬಸಪ್ಪನ ದೇವಾಲಯವು ಕನ್ನಡ ನಾಡಿನ ಹೆಮ್ಮೆಯ ಪ್ರತೀಕವೆಂದರೆ ತಪ್ಪಾಗಲಾರದು. ಸುಮಾರು ಎಂಟುನೂರು ವರ್ಷಗಳ ದೀರ್ಘ ಇತಿಹಾಸವನ್ನು ಹೊಂದಿರುವ ಈ ಸ್ಮಾರಕವು ಕೆಲವು ಚಿಕ್ಕಪುಟ್ಟ ದುರಸ್ತಿ ಕಾರ್ಯಗಳಿಗೆ ಒಳಗಾಗಿರುವುದನ್ನು ಬಿಟ್ಟರೆ ತನ್ನ ಮೂಲ ಸೌಂದರ್ಯವನ್ನು ಉಳಿಸಿಕೊಂಡಿದೆ. ಅಡಿಯಿಂದ ಮುಡಿಯವರೆಗೆ ನಕ್ಷತ್ರಾಕಾರದ ವಿನ್ಯಾಸವನ್ನು ಹೊಂದಿರುವ ಈ ದೇವಾಲಯ ಕರ್ನಾಟಕದ ವಾಸ್ತುಶಿಲ್ಪ ಅಧ್ಯಯನಕ್ಕೆ ವಿಶೇಷ ಉದಾಹರಣೆಯಾಗಿ ನಿಲ್ಲುತ್ತದೆ. ಕನ್ನಡ ನಾಡಿನ ವಾಸ್ತುಶಿಲ್ಪ ಅಧ್ಯಯನದ ಪಿತಾಮಹ ಹೆನ್ರಿಕಜಿನ್ಸ್ ಅವರು ಮೊಟ್ಟ ಮೊದಲಿಗರಾಗಿ ತುಂಬಾ ಶ್ರದ್ಧೆಯಿಂದ

ಡಂಬಳದ ದೊಡ್ಡಬಸಪ್ಪ ದೇವಾಲಯದ ಬಗೆಗೆ ಮಾಹಿತಿ ಬರೆದು ಪ್ರಕಟಿಸಿದ್ದಾರೆ. ಇಲ್ಲಿರುವ ಕಂಬಗಳಲ್ಲಿನ ಕೆತ್ತನೆಯ ಕಲಾ-ಕೌಶಲ್ಯಕ್ಕೆ ಮೆಚ್ಚಿದ್ದಲ್ಲದೆ, ಅವರು ಈ ದೇವಾಲಯದ ನಿರ್ಮಾಣ ಕಲ್ಯಾಣ ಚಾಲುಕ್ಯ ವಾಸ್ತುಶಿಲ್ಪಕ್ಕೆ ಹಿಡಿದ ಕನ್ನಡಿ ಎಂದು ಅಭಿಪ್ರಾಯಿಸಿದ್ದಾರೆ.

ಸುಂದರವಾದ ಈ ಸ್ಮಾರಕವು ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ ಹಾಗೂ ನಂದಿಮಂಟಪಗಳನ್ನು ಹೊಂದಿರುವುದು. ನಕ್ಷತ್ರಾಕಾರದ ತಲವಿನ್ಯಾಸವು ಈ ಗುಡಿಯ ಇನ್ನೊಂದು ವಿಶೇಷ. ದೇವಾಲಯದ ಎಲ್ಲಾ ಭಾಗಗಳು ವಿಶಾಲವಾಗಿವೆ. ಗರ್ಭಗೃಹದಲ್ಲಿ ನಕ್ಷತ್ರಕಾರದ ಸುಂದರವಾದ ಕೆತ್ತನೆಯ ಲಿಂಗವನ್ನು ಪ್ರತಿಷ್ಠಾಪಿಸಿದ್ದಾರೆ. ಅದಕ್ಕಿರುವ ಪೀಠವು ಸಹ ಕಲಾತ್ಮಕತೆಯಿಂದ ಕೂಡಿರುವುದು. ಗರ್ಭಗೃಹದಲ್ಲಿ ಭುವನೇಶ್ವರಿಯನ್ನು ಕೆತ್ತಿದ್ದಾರೆ. ಅದು ಕೂಡಾ ವಿಸ್ತಾರದಿಂದ ಕೂಡಿದ ಕೆತ್ತನೆಯಾಗಿದ್ದು ಅದರ ಪ್ರತಿಭಾಗವು ಎದ್ದು ಚಿತ್ರಿಸಲಾಗಿದೆ. ಗರ್ಭಗೃಹಕ್ಕಿರುವ ಎತ್ತರವಾದ ಬಾಗಿಲವಾಡವು ಅತ್ಯದ್ಭುತವಾಗಿದೆ. ಬಾಗಿಲವಾಡದಲ್ಲಿ ಏಳು ಪಟ್ಟಿಕೆಗಳಿದ್ದು ರಚಿಸಿದ್ದಾರೆ ಇನ್ನುಳಿದ ಪಟ್ಟಿಕೆಗಳಲ್ಲಿ ಚಿಕ್ಕ ಚಿಕ್ಕ ಉಬ್ಬುಶಿಲ್ಪಗಳನ್ನು ಕೆಳಭಾಗದ ಎರಡು ಕಡೆಗೆ ಕೆತ್ತಲಾಗಿದೆ. ಬಾಗಿಲವಾಡದ ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವನ್ನು ವಿಶೇಷವೆಂಬಂತೆ ನಿರ್ಮಿಸಿದ್ದಾರೆ. ಈ ಉಬ್ಬುಶಿಲ್ಪದ ಮೇಲ್ಭಾಗದಲ್ಲಿ ಕಪೋತ ರಚನೆ ಹಾಗೂ ಅದರ ಮೇಲ್ಭಾಗದಲ್ಲಿ ಚಿಕ್ಕ ಚಿಕ್ಕ ಮಂಟಪಗಳ ರಚನೆ ಮಾಡಿ ಕಲಾಕಾರನು ತನ್ನ ಕಾರ್ಯದ ಸೂಕ್ಷ್ಮತೆಯನ್ನು ಮೆರೆದಿದ್ದಾನೆ.

ವಿಶಾಲವಾದ ಗರ್ಭಗೃಹಕ್ಕೆ ಹೊಂದಿಕೊಂಡಂತೆ ಗರ್ಭಗೃಹದಷ್ಟೇ ವಿಸ್ತಾರವಾದ ಅಂತರಾಳವು ದೇವಾಲಯಕ್ಕಿದೆ. ಇದು ಬರಿದಾಗಿದೆ. ತೆರದ ಅಂತರಾಳಕ್ಕೆ ತೋರಣ ಕಂಬಗಳಿಂದ ಅಲಂಕರಣೆ ಮಾಡಿದ್ದಾರೆ. ಯಾಳಿ ಹಾಗೂ ಕೀರ್ತಿ ಮುಖ ಅಲಂಕರಣೆಯಿಂದ ಕಂಬಗಳನ್ನು ಸುಂದರಗೊಳಿಸಲಾಗಿದೆ. ತೋರಣಕ್ಕೆ ಬಳಸಿರುವ ಎರಡೂ ಕಂಬಗಳು ತಿರುಗಣಿ ಆಕಾರದವುಗಳಾಗಿವೆ.

ನವರಂಗವು ವಿಶಾಲವಾಗಿದ್ದು, ಸುಂದರ ಕೆತ್ತನೆಯ ನಾಲ್ಕು ಕಂಬಗಳು ಇಲ್ಲಿವೆ. ಅವು ಕಪ್ಪುಕಲ್ಲಿನಲ್ಲಿ ನಿರ್ಮಾಣವಾಗಿದ್ದು ತುಂಬಾ ನಯವಾಗಿವೆ. ಕಂಬಗಳ ಕೆಲಭಾಗಗಳಲ್ಲಿ ನಾಲ್ಕು ಕಡೆಗಳಲ್ಲೂ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಈ ಉಬ್ಬುಶಿಲ್ಪಗಳು ಶಿವನ ಅವತಾರಗಳನ್ನು ಪ್ರತಿನಿಧಿಸುತ್ತವೆ. ಅಲ್ಲದೆ ಕೆಲವು ಸ್ತ್ರೀ ಶಿಲ್ಪಗಳನ್ನು ಸಹ ನಿರ್ಮಿಸಲಾಗಿದೆ. ಕಂಬಗಳಲ್ಲಿ ವೃತ್ತಾಕಾರದ, ಗಂಟೆಯಾಕಾರದ ಹೂಬಳ್ಳಿ ರಚನೆಗಳು ವೃತ್ತಾಕಾರದ ಮತ್ತು ಬಟ್ಟಲಾಕೃತಿಯ ಕೆತ್ತನೆಗಳನ್ನು ಈ ಕಂಬಗಳಲ್ಲಿ ಅಳವಡಿಸಲಾಗಿದೆ. ಕಂಬಗಳಿಗೆ ಚೌಕಾಕಾರದ ಭೋಧಿಗೆಗಳನ್ನು ಜೋಡಿಸಲಾಗಿದೆ. ನವರಂಗದಲ್ಲಿನ ನಾಲ್ಕು ಕಂಬಗಳನ್ನೊಳಗೊಂಡಂತೆ ಭುವನೇಶ್ವರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಕೆತ್ತಿರುವ ಭುವನೇಶ್ವರಿ ಕಲ್ಯಾಣ ಚಾಲುಕ್ಯರ ಕಾಲದ ಕಲಾ ವೈಶಿಷ್ಟ್ಯತೆಯನ್ನು ಇತಿಹಾಸದುದ್ದಕ್ಕೂ ನೆನಪಿನಲ್ಲಿಡುವಂತೆ ಮಾಡಿದೆ. ಎಲೆಗಳನ್ನು ವೃತ್ತಗಳಲ್ಲಿ ಜೋಡಿಸಿಟ್ಟಂತೆ ತೋರುವ ಈ ಭುವನೇಶ್ವರಿಯ ಕೆತ್ತನೆಯಲ್ಲಿ ಕಲಾಕರ, ತನ್ನ ಗರಿಷ್ಠಮಟ್ಟದ ನೈಪುಣ್ಯತೆಯನ್ನು

ಮೆರೆದಂತಿದೆ. ನಾಲ್ಕು ಕಂಬಗಳನ್ನು ಒಳಗೊಂಡಂತೆ ಕೆಳಭಾಗದಲ್ಲಿ ಎತ್ತರದ ಕಟ್ಟೆಯನ್ನು ನಿರ್ಮಿಸಲಾಗಿದೆ. ಗುಡಿಯ ಛಾವಣಿಯಲ್ಲಿ ದೊಡ್ಡ ದೊಡ್ಡ ತೊಲೆಗಳನ್ನು ಜೋಡಿಸಲಾಗಿದೆ. ನವರಂಗಕ್ಕೆ ದಕ್ಷಿಣಾಭಿಮುಖವಾದ ದ್ವಾರ ನಿರ್ಮಿಸಲಾಗಿದೆ. ಅದರ ಮೂಲಕವೇ ಗುಡಿಯನ್ನು ಪ್ರವೇಶಿಸಬೇಕು.

ಮುಖ್ಯ ಗರ್ಭಗೃಹಕ್ಕೆ ಎದುರಾಗಿ ನಂದಿಮಂಟಪವನ್ನು ನಿರ್ಮಿಸಲಾಗಿದೆ. ಈ ಮಂಟಪವನ್ನು ಗುಡಿಯ ಜೊತೆಗೆ ಸೇರಿಸಿ ಕಟ್ಟಲಾಗಿದೆ. ನಕ್ಷತ್ರಾಕಾರದ ನಾಲ್ಕು ಕಂಬಗಳನ್ನು ಸೇರಿ ಬೃಹತ್ತಾದ ಮಂಟಪವನ್ನು ನಿರ್ಮಿಸಲಾಗಿದೆ. ಇಲ್ಲಿರುವ ಕಂಬಗಳು ಸಹ ಸೂಕ್ಷ್ಮಕುಸುರಿನ ಕೆತ್ತನೆಯಿಂದ ಕೂಡಿದ ಮನಮೋಹಕ ಕಂಬಗಳಾಗಿವೆ. ನಂದಿ ಶಿಲ್ಪವನ್ನು ನೋಡಿದ ತಕ್ಷಣ ಯಾರೇ ಆದರೂ ಬೆರಗುಗೊಳ್ಳದೆ ಇರಲಾರರು. ಸುಮಾರು ಎಂಟು ಅಡಿ ಎತ್ತರವಿರುವ ಈ ವಿಗ್ರಹವನ್ನು ಕಪ್ಪುಕಲ್ಲಿನಲ್ಲಿ ಕೆತ್ತಲಾಗಿದೆ. ಶಿಲ್ಪದಲ್ಲಿನ ಪ್ರತಿ ಕೆತ್ತನೆಯನ್ನು ಅತ್ಯಂತ ಸ್ಪಷ್ಟವಾಗಿ ಹಾಗೂ ನಯನಾಜೂಕಿನಿಂದ ಕಲಾಕಾರರು ಕೆತ್ತಿದ್ದಾರೆ. ಹಾಗೂ ವಿವಿಧ ಅಲಂಕಾರಗಳಿಂದ ಅಂದಗೊಳಿಸಿದ್ದಾನೆ. ಬಹುಶಃ ನಂದಿ ಮಂಟಪವನ್ನು ಪ್ರತ್ಯೇಕವಾಗಿ ನಿರ್ಮಿಸಿರುವ ಸಾಧ್ಯತೆಗಳಿವೆ. ಆದರೆ ಸಧ್ಯ ದೊಡ್ಡಬಸಪ್ಪನ ಗುಡಿಯನ್ನೊಳಗೊಂಡಂತೆ ನಂದಿಯ ವಿಗ್ರಹ ಹಾಗೂ ಅದಕ್ಕಿರುವ ಮಂಟಪದ ಸುತ್ತಲೂ ಗೋಡೆಯನ್ನು ಕಟ್ಟಲಾಗಿದೆ.

ದೇವಾಲಯಕ್ಕೆ ಪ್ರವೇಶ ಅಥವಾ ಮುಖ ಮಂಟಪವಿದೆ. ಅದನ್ನು ಸಹ ಕಂಬಗಳಿಂದ ಸುಂದರಗೊಳಿಸಲಾಗಿದೆ. ಅದರಲ್ಲಿ ಕಟ್ಟೆಯನ್ನು ಕಟ್ಟಲಾಗಿದೆ. ಮುಖಮಂಟಪಕ್ಕಿರುವ ಪ್ರವೇಶದ್ವಾರವು ಸಹ ಮುಖ್ಯಗರ್ಭಗೃಹದ ಬಾಗಿಲವಾಡದಂತೆ ತುಂಬಾ ಸುಂದರವಾಗಿದೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಮುಖಮಂಟಪದ ಕಕ್ಷಾಸನದ ಹೊರಗೋಡೆಯಲ್ಲಿ ಆನೆಸಾಲುಗಳ ಪಟ್ಟಿಕೆಗಳನ್ನು ರಚಿಸಲಾಗಿದೆ.

ದೇವಾಲಯವು ಅಡಿಯಿಂದ ಮುಡಿಯವರೆಗೆ ನಕ್ಷತ್ರಾಕಾರದ ವಿನ್ಯಾಸ ಹೊಂದಿರುವುದು. ಅಧಿಷ್ಠಾನದಲ್ಲಿ ಉಪಾನ, ಜಗತಿ ಅದರ ಮೇಲ್ಭಾಗದಲ್ಲಿ ಕಪೋತವನ್ನು ರಚಿಸಲಾಗಿದೆ. ಈ ಕಪೋತದಲ್ಲಿ ಮಂಟಪಗಳ ಅಲಂಕಾರ ಮಾಡಲಾಗಿದೆ. ಅಲ್ಲದೇ ಹೊರಗೋಡೆಯ ಪ್ರತಿಯೊಂದು ಮೂಲೆಯಲ್ಲಿ ಗಜ ಉಬ್ಬುಶಿಲ್ಪವನ್ನು ಅಳವಡಿಸಿಲಾಗಿದೆ. ಹೊರಗೋಡೆಯಲ್ಲಿ ಪಂಜರ, ಕೀರ್ತಿಮುಖ ಹಾಗೂ ಮಣಿಸರಗಳಿಂದ ಅಲಂಕಾರ ಮಾಡಲಾಗಿದೆ.

ಶಿಖರವು ಅದ್ಭುತವಾಗಿದೆ. ಪ್ರತಿಹಂತದಲ್ಲೂ ಬಿಡಿಶಿಲ್ಪಗಳನ್ನು ಹಾಗೂ ಚಿಕ್ಕಮಂಟಪ ಅಲಂಕಾರದಿಂದ ಸೌಂದರ್ಯವನ್ನು ಇಮ್ಮಡಿಗೊಳಿಸಲಾಗಿದೆ. ಇಡೀ ಶಿಖರ ನಕ್ಷತ್ರಾಕಾರದಲ್ಲಿದ್ದು ಮೊದಲ ನೋಟದಲ್ಲಿ ಕಣ್ಮನ ಸೆಳೆಯುತ್ತಿದೆ.[೨೬]

**ಡಂಬಳದ ಸಿದ್ದೇಶ್ವರ ದೇವಾಲಯ**

ಡಂಬಳದ ಪಟ್ಟಣಶೆಟ್ಟಿಯವರ ಹೊಲದಲ್ಲಿರುವ ಮತ್ತು ಜಪದ ಬಾವಿಯಿಂದ ೬೦ ಮೀಟರ್

ದೂರ ಇರುವ ಸಿದ್ದೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದೆ. ಈ ದೇವಾಲಯವು ಎತ್ತರ ಕಟ್ಟೆಯ ಮೇಲೆ ನಿರ್ಮಾಣವಾಗಿದೆ. ಇದನ್ನು ಡಬ್ಬುಗಲ್ಲು ಗುಡಿ ಸೋಮೇಶ್ವರ ಹಾಗೂ ಮಧುಕೇಶ್ವರ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಉಸುಕು ಕಲ್ಲಿನಲ್ಲಿ ರಚನೆಯಾಗಿರುವ ಈ ದೇವಾಲಯ ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ. ನವರಂಗದ ಮಂಟಪಕ್ಕೆ ಮೂರು ಕಡೆ ಪ್ರವೇಶ ದ್ವಾರಗಳನ್ನು ನಿರ್ಮಿಸಿದ್ದು ಅವುಗಳ ಮೂಲಕ ಗುಡಿಯನ್ನು ಪ್ರವೇಶಿಸಲು ದ್ವಾರಗಳಿವೆ.

ಗರ್ಭಗೃಹ ಚೌಕಾಕಾರವಾಗಿದ್ದು ವಿಶಾಲವೂ ಆಗಿದೆ. ಇದರಲ್ಲಿ ಲಿಂಗವಿದೆ. ಲಿಂಗಕ್ಕೆ ಚೌಕಾಕಾರದ ಪೀಠ, ವೃತ್ತಾಕಾರದ ಪಾನ ಬಟ್ಟಲು ಹಾಗೂ ದುಂಡಾಕಾರದ ಗಿಡ್ಡನೆಯ ರುದ್ರಭಾಗವಿದೆ. ಅಲಂಕರಣೆಯಿಂದ ಕೂಡಿದ ಬಾಗಿಲವಾಡವು ಗರ್ಭಗೃಹಕ್ಕಿದ್ದು ಅದು ನಾನಾ ಬಗೆಯ ಕೆತ್ತನೆಗಳನ್ನೊಳಗೊಂಡಿದೆ. ಅಷ್ಟಪಟ್ಟಿಕೆ, ವೃತ್ತಾಕಾರದ ಪಟ್ಟಿಕೆ, ಮಣಿಸರ ಅಷ್ಟೇ ಅಲ್ಲದೆ ಬಾಗಿಲವಾಡದ ಸುತ್ತಲೂ ವಜ್ರಾಕೃತಿಯ ಅಲಂಕರಣೆಯ ಪಟ್ಟಿಕೆಯನ್ನು ಚಿತ್ರಿಸಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿರುವದು. ಅದರ ಮೇಲ್ಭಾಗದಲ್ಲೂ ಅರ್ಧಕಂಬಗಳು ಕಂಡುಬರುತ್ತದೆ. ಭವನೇಶ್ವರಿಯ ಕೆತ್ತನೆಯನ್ನು ಸಹ ಗರ್ಭಗೃಹದಲ್ಲಿ ಕಾಣುತ್ತೇವೆ.

**ಡಂಬಳದ ಸೋಮೇಶ್ವರ ದೇವಾಲಯ**



ದೊಡ್ಡ ಬಸವಣ್ಣ ದೇವಾಲಯದ ನೈಋತ್ಯಕ್ಕೆ ಇರುವ ಈ ಸೋಮನಾಥ ದೇವಾಲಯವನ್ನು ಶಾಸನದಲ್ಲಿ "ಮೈಲಭೇಶ್ವರ" ಎಂದು ಕರೆಯಲಾಗಿದೆ. ಡಂಬಳದಲ್ಲಿ ದೊರೆತಿರುವ ಶಾಸನಗಳಿಂದ ಈ ದೇವಾಲಯವನ್ನು ಚಾಲುಕ್ಯ ಒಂದನೇ ಸೋಮೇಶ್ವರನ ಅರಸಿ ಮೈಳಲದೇವಿಯ ನೆನಪಿನಲ್ಲಿ ಕಟ್ಟಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಉಸುಕು ಕಲ್ಲಿನಲ್ಲಿ ರಚನೆಯಾಗಿರುವ ಈ ದೇವಾಲಯ ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ. ನವರಂಗದ ಮಂಟಪಕ್ಕೆ ಮೂರು ಕಡೆ ಪ್ರವೇಶದ್ವಾರಗಳನ್ನು ನಿರ್ಮಿಸಿದ್ದು ಅವುಗಳ ಮೂಲಕ ಗುಡಿಯನ್ನು ಪ್ರವೇಶಿಸಬಹುದು.

ಗರ್ಭಗೃಹ ಚೌಕಾಕಾರವಾಗಿದ್ದು ವಿಶಾಲವೂ ಆಗಿದೆ. ಇದರಲ್ಲಿ ಲಿಂಗವಿದೆ. ಅದಕ್ಕೆ ಚೌಕಾಕಾರದ ಪೀಠ, ವೃತ್ತಾಕಾರದ ಪಾನಬಟ್ಟಲು ಹಾಗೂ ದುಂಡಾಕಾರದ ಗಿಡ್ಡನೆಯ ರುದ್ರಭಾಗವಿದೆ. ಅಲಂಕರಣೆಯಿಂದ ಕೂಡಿದ ಬಾಗಿಲವಾಡ ಗರ್ಭಗೃಹಕ್ಕಿದ್ದು ಅದು ನಾನಾ ಬಗೆಯ ಕೆತ್ತನೆಗಳನ್ನೊಳಗೊಂಡಿದೆ. ಅಷ್ಟಪಟ್ಟಿಕೆ, ವೃತ್ತಾಕಾರದ ಪಟ್ಟಿಕೆ,. ಮಣಿಸರ ಅಲಂಕರಣೆಯ ಪಟ್ಟಿಕೆ ಹಾಗೂ ಹೊಸೆದ ಹಗ್ಗದಂತೆ ಕಾಣುವ ಕುಸುರಿ ಅಷ್ಟೇ ಅಲ್ಲದೆ ಬಾಗಿಲವಾಡದ ಸುತ್ತಲೂ ವಜ್ರಾಕೃತಿಯ ಅಲಂಕರಣೆಯ ಪಟ್ಟಿಕೆಯನ್ನು ಚಿತ್ರಿಸಿದ್ದಾರೆ. ಲಲಾಟದಲ್ಲಿ ಗಜಲಕ್ಷ್ಮೀ, ಉಬ್ಬುಶಿಲ್ಪವಿರುವುದು. ಅದರ ಮೇಲ್ಭಾಗದಲ್ಲಿ ಕಪೋತ ಅಲಂಕರಣೆಯಿದೆ. ಗರ್ಭಗೃಹದ ಒಳಗಡೆ ಪ್ರತಿ ಮೂಲೆಯಲ್ಲೂ ಅರ್ಧಗಂಭಗಳು ಕಂಡುಬರುತ್ತವೆ. ಸುಂದರ ಭುವನೇಶ್ವರಿಯನ್ನು ಸಹ ಗರ್ಭಗೃಹದಲ್ಲಿ ರಚಿಸಲಾಗಿದೆ.

ಅಂತರಾಳವು ಬರಿದಾಗಿದೆ. ಆದರೆ ಹೊರಗಿನಿಂದ ತಂದಿರುವ ನಂದಿ ಶಿಲ್ಪವನ್ನು ಇತ್ತೀಚೆಗೆ ಇಡಲಾಗಿದೆ. ಬಾಗಿಲವಾಡವನ್ನು ಜಾಲಂಧರಗಳಿಂದ ಅಲಂಕರಣೆಗೊಳಿಸಲಾಗಿದೆ. ಸುತ್ತಲೂ ಮಣಿಸರ ಹಾಗೂ ಹೊಸೆದ ಹಗ್ಗದ ತರಹ ಅಲಂಕರಣೆ ಮಾಡಲಾಗಿದೆ. ಅಂತರಾಳದಲ್ಲಿರುವ ಬಾಗಿಲವಾಡದ ಲಲಾಟ ಭಾಗದಲ್ಲಿ ಕೂಡಾ ಜಾಲಂಧರವೇ ಮುಂದುವರೆದಿದೆ.

ನವರಂಗ ಮಂಟಪ ಇಪ್ಪತ್ನಾಲ್ಕು ಕಂಬಗಳನ್ನು ಹೊಂದಿದೆ. ಅಲ್ಲದೇ ಅರ್ಧಕಂಬಗಳು ಸಹ ನವರಂಗದಲ್ಲಿ ಕಾಣುತ್ತೇವೆ. ಇಲ್ಲಿರುವ ಅರ್ಧಕಂಬಗಳಲ್ಲಿ ಐದು ಪಟ್ಟಿಕೆಗಳನ್ನು ನಿರ್ಮಿಸಲಾಗಿದೆ. ಅವುಗಳಲ್ಲಿಯೂ ಕೆಲವು ಅಲಂಕರಣೆಗಳನ್ನು ಚಿತ್ರಿಸಲಾಗಿದೆ. ತಿರುಗಣೆ ಯಂತ್ರದಿಂದ ಮಾಡಲ್ಪಟ್ಟಿರುವ ನವರಂಗದಲ್ಲಿನ ನಾಲ್ಕು ಕಂಬಗಳು ಗಂಟೆಯಾಕಾರದವು. ಇವೆಲ್ಲವುಗಳನ್ನೊಳಗೊಂಡಂತೆ ಮಧ್ಯದಲ್ಲಿ ವೃತ್ತಾಕಾರದ ಕಟ್ಟೆಯನ್ನು ನಿರ್ಮಿಸಲಾಗಿದೆ. ಮೇಲ್ಭಾಗದಲ್ಲಿ ಭುವನೇಶ್ವರಿಯನ್ನು ರಚಿಸಲಾಗಿದೆ. ಈ ಕಂಬಗಳಿಗೆ ವೃತ್ತಾಕಾರದ ತಟ್ಟೆ ಆಕಾರದ ಫಲಕ ಹಾಗೂ ಚೌಕಾಕಾರದ ಭೋಧಿಗೆಯನ್ನು ಅಳವಡಿಸಿದೆ. ಉಳಿದ ಕಂಬಗಳು ನಕ್ಷತ್ರಾಕಾರದಲ್ಲಿವೆ. ಅವು ಎರಡು ಪಟ್ಟಿಕೆಯ ರಚನೆಗಳಿಂದ ಕೂಡಿವೆ. ನವರಂಗಕ್ಕೆ ಕಕ್ಷಾಸನವನ್ನು ನಿರ್ಮಿಸಲಾಗಿದೆ. ಕಟ್ಟೆಯಲ್ಲಿ ಸಹ ಕಂಬಗಳನ್ನು ನಿರ್ಮಿಸಲಾಗಿದೆ. ಅವು ಗಂಟೆಯಾಕಾರದ ಕಂಬಗಳಾಗಿದ್ದು ಎಂಟು ಪಟ್ಟಿಕೆಗಳಿಂದ ಕೂಡಿವೆ.

ಗರ್ಭಗೃಹ ಹಾಗೂ ಅಂತರಾಳದ ಹೊರಗೋಡೆಯನ್ನು ವಿವಿಧ ತರಹದ ಅರ್ಧಗಂಭಗಳಿಂದ ಅಂದಗೊಳಿಸಲಾಗಿದೆ. ಅವುಗಳಲ್ಲಿ ಗಂಟೆಯಾಕಾರದ ಅರ್ಧಕಂಬಗಳು ವಿಶೇಷವಾಗಿ ಮೂಡಿಬಂದಿವೆ. ಮೇಲ್ಛಾವಣಿಯಲ್ಲಿ ಮಂಜೂರಿನ ಭಾಗ ನಿರ್ಮಿತವಾಗಿದೆ. ಗುಡಿಯ ಮೇಲ್ಛಾಚಾವಣಿಯನ್ನು ಶಿಲಾಫಲಕಗಳಿಂದ ಹೊದಿಸಲಾಗಿದ್ದು ಕಲ್ಲುಗಳಿಂದಲೇ ದೇವಾಲಯವನ್ನು ಮುಚ್ಚಿದ (ಡಬ್ಬು) ಹಾಗೆ ತೋರುತ್ತದೆ. ಹೀಗಾಗಿ ಸೋಮೇಶ್ವರ ಗುಡಿಯನ್ನು ಸ್ಥಳೀಯರು ಡಬ್ಬುಗಲ್ಲು ಗುಡಿ ಎಂದು ಕರೆಯುವ ರೂಢಿಯಿದೆ.

ದೇವಾಲಯದ ಅಧಿಷ್ಠಾನವು ಉಪಾನ, ಜಗತಿ, ಗಳ, ತ್ರಿಪಟ್ಟ. ಕುಮುದ ಹಾಗೂ ಕಪೋತ ಭಾಗಗಳಿಂದ ಅಲಂಕರಿಸಲಾಗಿದೆ. ಕಪೋತ ಭಾಗದ ಮೇಲೆ ಇನ್ನೊಂದು ಪಟ್ಟಿಕೆಯು ದೇವಾಲಯದ ಸುತ್ತಲೂ ನಿರ್ಮಾಣವಾಗಿದೆ. ಸೋಪಾನ (ಮೆಟ್ಟಲು)ಗಳ ಮೂಲಕ ನವರಂಗಕ್ಕೆ ಪ್ರವೇಶವಿದೆ. ಇಲ್ಲಿರುವ ಮೆಟ್ಟಿಲುಗಳನ್ನು ಆನೆಯ ಶಿಲ್ಪ ಫಲಕದಿಂದ ಜೋಡಿಸಿ ಅಂದವನ್ನು ಹೆಚ್ಚಿಸಲಾಗಿದೆ. ಮೇಲೆ ಪುಷ್ಪ ಅಲಂಕರಣೆ ಸಹ ಮಾಡಲಾಗಿದೆ. ದೇವಾಲಯಕ್ಕೆ ಶಿಖರವಿಲ್ಲ. ಬಹುಶಃ ಶಿಖರವು ಬಿದ್ದು ಹೋಗಿರಬಹುದು.[೨೬]

**ಮೇವುಂಡಿಯ ದಿಡಿಗೇಶ್ವರ ದೇವಾಲಯ**

ಮುಂಡರಗಿಯಿಂದ ೧೦ ಕಿ.ಮೀ. ದೂರದ ಮೇವುಂಡಿಯಲ್ಲಿ ಈ ದೇವಾಲಯವಿದೆ. ದಿಡಿಗೇಶ್ವರ ದೇವಾಲಯವು ದಕ್ಷಿಣಾಭಿಮುಖವಾಗಿದ್ದು ಸುಮಾರು ಕ್ರಿ.ಶ.೧೩-೧೪ನೇ ಶತಮಾನದ್ದಾಗಿದೆ. ಈ

ದೇವಾಲಯದ ಆವರಣದಲ್ಲಿ ದಕ್ಷಿಣಾಭಿಮುಖವಾಗಿರುವ ಈಶ್ವರ ದೇವಾಲಯ ನಿರಾಲಂಕಾರದಿಂದ ಕೂಡಿದೆ. ಒಂದು ಚಿಕ್ಕಮಂಟಪದ ಹಾಗೆ ಕಾಣುವ ಈ ಗುಡಿಯಲ್ಲಿ ಲಿಂಗವನ್ನಿಡಲಾಗಿದೆ. ಹೊರ ಮತ್ತು ಒಳಗೋಡೆಗಳು ಅಲಂಕಾರ ರಹಿತವಾಗಿದೆ. ಅದಿಷ್ಠಾನವು ಸಹ ಸಾದಾ ರಚನೆಯಲ್ಲಿದ್ದು ಇದಕ್ಕೂ ಕೂಡಾ ಶಿಖರವಿಲ್ಲ. ಮೇಲ್ಚಾವಣಿಯನ್ನು ಗಾರೆ ಗಚ್ಚುಗಳಿಂದ ದುರಸ್ತಿಗೊಳಿಸಲಾಗಿದೆ.[೨೮]

**ಬಿದರಳ್ಳಿಯ ಸೋಮೇಶ್ವರ ದೇವಾಲಯ**

ಮುಂಡರಗಿಯಿಂದ ನೈಋತ್ಯಕ್ಕೆ ೩೨ ಕಿ.ಮೀ. ದೂರದಲ್ಲಿ ಈ ದೇವಾಲಯವಿದೆ. ತುಂಗಭದ್ರಾ ನದಿ ತೀರದಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಕಲ್ಯಾಣ ಚಾಲುಕ್ಯ ಶೈಲಿಯನ್ನು ಹೊಂದಿರುವ ಈ ದೇವಾಲಯವು ಕ್ರಿ.ಶ.೧೧-೧೨ನೇ ಶತಮಾನಕ್ಕೆ ಸೇರಿದ್ದಾಗಿದೆ. ಶಾಸನೋಕ್ತವಾಗಿರುವ ಈ ದೇವಾಯಲವು ಗರ್ಭಗೃಹ, ಅಂತರಾಳ ಹಾಗೂ ವಿಶಾಲವಾದ ನವರಂಗವನ್ನು ಹೊಂದಿದೆ. ಅಂತರಾಳ ಜಾಲಂದ್ರ ವಿನ್ಯಾಸವನ್ನು ಹೊಂದಿದ್ದು ದ್ವಾರಬಂಧ ಸರಳವಾಗಿದೆ. ಮಂಗಲಫಲಕದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಶಿಲ್ಪಗಳನ್ನು ಆಕರ್ಷಕವಾಗಿ ಕಂಡರಿಸಿದ್ದಾರೆ. ನವರಂಗದಲ್ಲಿ ಅಷ್ಟಕೋನ ಮಾದರಿಯ ಚಾಲುಕ್ಯಶೈಲಿಯ ನಾಲ್ಕು ಸ್ತಂಭಗಳಿವೆ. ಪೂರ್ವ, ಪಶ್ಚಿಮ, ದಕ್ಷಿಣಾಭಿಮುಖವಾದ ಮೂರು ಪ್ರವೇಶದ್ವಾರಗಳಿದ್ದು, ಗೋಡೆಯಲ್ಲಿ ಕೋಷ್ಟಗಳನ್ನು ಹೊಂದಿದೆ.

**ನಾಗರಹಳ್ಳಿಯ ಪಂಚಲಿಂಗೇಶ್ವರ ದೇವಾಲಯ**

ಮುಂಡರಗಿಯಿಂದ ಆಗ್ನೇಯಕ್ಕೆ ೨.ಕಿ.ಮೀ. ಅಂತರದ ತುಂಗಭದ್ರಾ ತೀರದಲ್ಲಿ ಈ ನಾಗರಹಳ್ಳಿ (ಅರಗಿಲವಾಡ) ಗ್ರಾಮವಿದೆ. ಇಲ್ಲಿರುವ ಪಂಚಲಿಂಗೇಶ್ವರ ದೇವಾಲಯವು ಶಾಸನೋಕ್ತ ಧರ್ಮೇಶ್ವರ ದೇವಾಲಯವಾಗಿದೆ. ತುಂಗಭದ್ರಾ ನದಿ ತೀರದ ಪೂರ್ವಾಭಿಮುಖವಾಗಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯನ್ನು ಹೊಂದಿದೆ. ಕ್ರಿ.ಶ.೧೨-೧೩ನೇ ಶತಮಾನಕ್ಕೆ ಸೇರಿದ ಈ ದೇವಾಲಯವು ಆಯಾತಾಕಾರದಲ್ಲಿದ್ದು, ನವರಂಗದಲ್ಲಿ ಚಾಲುಕ್ಯ ಶೈಲಿಯ ಎಂಟು ಕಂಬಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಪಂಚಲಿಂಗವೆಂದು ಕರೆಯುವ ಶಿವಲಿಂಗವು ಒಂದೇ ವೃತ್ತಾಕಾರದ ಪಾಣಿಪೀಠದ ಮೇಲೆ ದೊಡ್ಡದಾದ ಲಿಂಗವನ್ನು ಹಾಗೂ ಉಪದಿಕ್ಕುಗಳಲ್ಲಿ ಒಂದೊಂದು ಕಿರುಲಿಂಗವನ್ನು ಕೆತ್ತಿದ್ದು 'ಪಂಚಮುಖಿ' ಶಿವನು ಲಿಂಗರೂಪದಲ್ಲಿ ಇಲ್ಲಿ ಮೂಡಿರುವಂತೆ ಕೆತ್ತಲಾಗಿದೆ. ಇದರ ಬದಿಯಲ್ಲಿಯೇ ಇರುವ ಮತ್ತೊಂದು ವೃತ್ತಾಕಾರದ ಪಾಣಿಪೀಠದಲ್ಲಿ ಷಡ್‌ನಂದಿಗಳು ಷಡ್‌ದಿಶೆಯತ್ತ ಮುಖಮಾಡಿರುವ ಶಿವಲಿಂಗವಿದೆ. ಇಲ್ಲಿರುವ ಆರು ನಂದಿಗಳು ಷಡ್‌ಸ್ಥಳಗಳನ್ನು ನಡುವೆ ಇರುವ ಶಿವಲಿಂಗ ಶಿವಾಸಾಯುಜ್ಯವನ್ನು ಸೂಚಿಸುತ್ತಿರಬಹುದೇನೋ ಎಂದೆನಿಸುತ್ತದೆ. ಸಪ್ತಮಾತೃಕೆ ಈ ಗುಡಿಯ ಪಕ್ಕದಲ್ಲಿ ಕಾಣಬಹುದು.

**ಬರದೂರಿನ ಭರತೇಶ್ವರ ದೇವಾಲಯ**

ಮುಂಡರಗಿಯಿಂದ ವಾಯುವ್ಯಕ್ಕೆ ೫ ಕಿ.ಮೀ. ದೂರದಲ್ಲಿರುವ ಗ್ರಾಮ ಬರದೂರು. ಇಲ್ಲಿರುವ

ಭರತೇಶ್ವರ ದೇವಾಲಯವು ಕ್ರಿ.ಶ. ೧೭-೧೮ನೇ ಶತಮಾನಕ್ಕೆ ಸೇರಿದ್ದಾಗಿದೆ. ಪೂರ್ವಾಭಿಮುಖವಾಗಿರುವ ಪ್ರಾಚೀನ ದೇವಾಲಯವನ್ನು ಪುನಃ ನಿರ್ಮಿಸಿರುವ ಕುರುಹುಗಳಿವೆ. ಹಾಳಾಗಿರುವ ಹಳೆಯ ದೇವಾಲಯದ ಅವಶೇಷಗಳಾದ ಸಪ್ತಮಾತೃಕೆಯ ಶಿಲ್ಪ ಹಾಗೂ ನಾಗಶಿಲ್ಪಗಳನ್ನು ಆವರಣದಲ್ಲಿ ಇಡಲಾಗಿದೆ. ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಹಾಗೂ ನವರಂಗಗಳಿವೆ. ಗರ್ಭಗೃಹದಲ್ಲಿ ಲಿಂಗವಿದ್ದು ನಿತ್ಯ ಪೂಜೆಗೊಳಪಡುತ್ತದೆ. ಗರ್ಭಗೃಹದ ಬಾಗಿಲವಾಡ ನಿರಾಲಂಕಾರದಿಂದ ಕೂಡಿದೆ. ಅಂತರಾಳವು ಬರಿದಾಗಿದೆ. ನವರಂಗವನ್ನು ಹೆಚ್ಚಿನ ದುರಸ್ತಿ ಕಾರ್ಯಕ್ಕೆ ಒಳಪಡಿಸಲಾಗಿದೆ. ದಕ್ಷಿಣಾಭಿಮುಖವಾಗಿ ಬಾಗಿಲೊಂದನ್ನು ನವರಂಗದಲ್ಲಿ ನಿರ್ಮಿಸಲಾಗಿದೆ. ದೇವಾಲಯದ ಹೊರಗೋಡೆ ಹಾಗೂ ಅಧಿಷ್ಠಾನ ಭಾಗವು ನಿರಾಲಂಕಾರದಿಂದ ಕೂಡಿದೆ. ಕ್ರಿ.ಶ. ೧೦೩೨ರ ಶಾಸನದಲ್ಲಿ ಉಲ್ಲೇಖಿತವಾದ ಈ ಗುಡಿಯು ಪ್ರಾಚೀನದ್ದಾಗಿದ್ದು, ಇದೇ ಈ ಶಾಸನದಲ್ಲಿ ಬರದೂರನ್ನು 'ಭರತಪುರ' ಎಂದು ಉಲ್ಲೇಖವಾಗಿರುವ ಸಂಗತಿ ತಿಳಿದು ಬರುತ್ತದೆ.

**ಪೇಠಾಲೂರಿನ ನಾಗನಾಥೇಶ್ವರ ದೇವಾಲಯ**

ಮುಂಡರಗಿ ವಾಯುವ್ಯಕ್ಕೆ ೧೧ ಕಿ.ಮೀ. ದೂರದಲ್ಲಿ ಪೇಠಾಲೂರು ಇದೆ. ಇಲ್ಲಿರುವ ನಾಗಥೇಶ್ವರ ದೇವಾಲಯವು ಗ್ರಾಮದ ಕೋಟೆಯ ಈಶಾನ್ಯ ದಿಕ್ಕಿಗೆ ಗ್ರಾಮದ ಮಧ್ಯದಲ್ಲಿ ಕಲ್ಲುಗಳಿಂದ ನಿರ್ಮಿತವಾಗಿದೆ. ಉತ್ತರಾಭಿಮುಖವಾಗಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯರ ಶೈಲಿಯನ್ನು ಹೊಂದಿದೆ. ಸುಮಾರು ೧೧ನೇ ಶತಮಾನಕ್ಕೆ ಸೇರಿದ ಈ ದೇವಾಲಯವು ಗರ್ಭಗೃಹ, ಅಂತರಾಳ, ತೆರೆದ ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹವು ಆಯಾತಾಕಾರದಲ್ಲಿದ್ದು ಇದರಲ್ಲಿ ಮೂರು ಲಿಂಗಗಳು ಇವೆ. ಗರ್ಭಗೃಹವು ಮೂರು ಅಂಕಣದ ಆಕಾರವನ್ನು ಹೊಂದಿರುತ್ತದೆ. ಈ ದೇವಾಲಯದ ಒಂದು ಶಾಸನದಲ್ಲಿ 'ತ್ರೈಪುರುಷ' ಎಂಬ ಉಲ್ಲೇಖ ಕಂಡುಬರುತ್ತದೆ. ಹಾಗೂ ಅಲ್ಲಿ ಮೂರು ಲಿಂಗಗಳು ಕಂಡುಬರುತ್ತವೆ. ಇದೊಂದು ವಿಶೇಷವೇ ಎನ್ನಬಹುದು. ಗರ್ಭಗೃಹದ ಮೂಲೆಯಲ್ಲಿ ಅರ್ಧ ಕೆತ್ತನೆಯ ಕಂಬಗಳು ಇವೆ. ಗರ್ಭಗೃಹದ ಲಲಾಟದಲ್ಲಿ ಗಜಲಕ್ಷ್ಮಿಯ ಸುಂದರವಾದ ಉಬ್ಬುಶಿಲ್ಪವಿದೆ. ಬಾಗಿಲವಾಡದ ಎದುರಿಗೆ ನಂದಿ ವಿಗ್ರಹವು ಮಧ್ಯವಿರುವ ಲಿಂಗಕ್ಕೆ ಎದುರಾಗಿ ಸ್ಥಾಪಿಸಲ್ಪಟ್ಟಿದೆ. ಅಂತರಾಳದ ಮಹಾದ್ವಾರದ ದಕ್ಷಿಣದ ಕಡೆಗೆ ಭಿತ್ತಿಯ ಭಾಗದಲ್ಲಿ ಸಪ್ತಮಾತೃಕೆಯರನ್ನು ಕೆತ್ತಲಾಗಿದೆ. ಅಂತರಾಳದ ಎಡಬದಿಯ ಭಿತ್ತಿಯಲ್ಲಿ ಚಿಕ್ಕದಾದ ಮಹಿಷಮರ್ದಿನಿಯ ಶಿಲ್ಪವಿದೆ.

ದೇವಸ್ಥಾನದ ಅಂತರಾಳದ ಮುಂದಿನ ಭಾಗವೇ ನವರಂಗ. ನವರಂಗದ ಸುತ್ತಲೂ ಭಿತ್ತಿಗಳು ಇಲ್ಲದೇ ಇರುವದರಿಂದ ಇದನ್ನು ತೆರೆದ ನವರಂಗವೆಂದು ಕರೆಯಬಹುದು. ಈ ನವರಂಗವು ೧೨ ಕಂಬಗಳ ಮೇಲೆ ನಿಂತಿದೆ. ಮುಂದಿನ ಒಂದು ಕಂಬದ ಪೀಠದ ಭಾಗದಲ್ಲಿ ೧೬ನೆಯ ಶತಮಾನದ ಶಿಲಾಶಾಸನವಿದೆ. ಕಲ್ಯಾಣ ಚಾಲುಕ್ಯ ಶೈಲಿಯಲ್ಲಿರುವ ೪ ಕಂಬಗಳನ್ನು ಸುತ್ತುವರೆದ ಉಳಿದ

ಕಂಬಗಳು ಚೌಕಾಕಾರದಲ್ಲಿವೆ. ನವರಂಗವನ್ನು ಪ್ರವೇಶಿಸಲು ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿ ಪ್ರವೇಶವನ್ನು ಕಲ್ಪಿಸಲಾಗಿದೆ. ನವರಂಗದ ಮಧ್ಯಕ್ಕಿರುವ ನಾಲ್ಕು ಕಂಬಗಳ ನಡುವೆ ಸಭಾ ಗೃಹವಿದೆ. ಈ ಸಭಾಗೃಹಕ್ಕೆ ಕಮಲದ ಹೂವಿನಲ್ಲಿ ಕೆತ್ತಿದ ಮೇಲ್ಛಾವಣಿ ಇದೆ. ದಕ್ಷಿಣ ಪ್ರವೇಶದ್ವಾರದ ಬದಿಯ ಭಿತ್ತಿಯಲ್ಲಿ ಕಲ್ಯಾಣದ ಚಾಲುಕ್ಯರ ಕಾಲದ ಮೂರು ಶಾಸನಗಳಿವೆ. ಇವುಗಳಲ್ಲಿ ಮೊದಲನೆಯ ಶಾಸನವು ಕ್ರಿ.ಶ.೧೦೧೦ ವರ್ಷದ ಐದನೆಯ ವಿಕ್ರಮಾದಿತ್ಯನ ಶಾಸನವಾಗಿದೆ. ಎರಡನೆಯದು ಸೋಮೇಶ್ವರನ ಕಾಲಕ್ಕೆ ಬರೆಸಲ್ಪಟ್ಟ ಶಾಸನವಾಗಿದೆ. ಮೂರನೇ ಶಾಸನ ಆರನೆಯ ವಿಕ್ರಮಾದಿತ್ಯನ ಕಾಲದ ಶಾಸನವಾಗಿದ್ದು ಇದರ ಕಾಲ ಕ್ರಿ.ಶ.೧೧೨೪ ಆಗಿದೆ.

ಈ ದೇವಾಲಯಕ್ಕೆ ಮುಖ್ಯದ್ವಾರದಲ್ಲಿ ನಾಲ್ಕು ಕಂಬಗಳ ಮುಖಮಂಟಪವಿದೆ. ದ್ವಾರಗಳ ಮುಂದೆ ಮೆಟ್ಟಿಲುಗಳಿದ್ದು ದ್ವಾರದ ಎರಡೂ ಬದಿಗೆ ಎರಡು ಆನೆಗಳನ್ನು ಕೆತ್ತಲಾಗಿದೆ. ಈ ದೇವಾಲಯವು ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಕಟ್ಟಲ್ಪಟ್ಟಿವೆ.

**ಡೋಣಿಯ ಸಿದ್ಧಲಿಂಗೇಶ್ವರ ದೇವಾಲಯ**

ಮುಂಡರಗಿಯಿಂದ ವಾಯುವ್ಯಕ್ಕೆ ೨೮ ಕಿ.ಮೀ.ದೂರದ ಡೋಣಿಯ ಹಳ್ಳದ ದಂಡೆಯ ಮೇಲೆ ಸಿದ್ಧಲಿಂಗೇಶ್ವರ ದೇವಾಲಯ ನಿರ್ಮಾಣವಾಗಿದೆ. ಈ ಗುಡಿಯ ನವರಂಗ ಹಲವು ದುರಸ್ತಿ ಕಾರ್ಯಗಳಿಗೆ ಒಳಗಾಗಿರುವುದನ್ನು ಕಾಣುತ್ತೇವೆ. ಗರ್ಭಗೃಹ, ಅಂತರಾಳ, ನವರಂಗ ಹಾಗೂ ಇತ್ತೀಚಿಗೆ ಕಟ್ಟಿಸಿದ ಮಂಟಪವು ದೇವಾಲಯದಲ್ಲಿದೆ. ಗರ್ಭಗೃಹದ ಒಳಗೋಡೆ ಹಾಗೂ ನೆಲಹಾಸು ಅಮೃತಶಿಲೆಯಿಂದ ಅಲಂಕರಣಗೊಳಿಸಲಾಗಿದೆ. ಇದರಲ್ಲಿನ ಲಿಂಗವು ನಿತ್ಯಪೂಜೆಗೆ ಒಳಪಡುತ್ತದೆ. ನಿರಾಲಂಕಾರದಿಂದ ಕೂಡಿದ ಚಿಕ್ಕದಾದ ಬಾಗಿಲವಾಡವು ಗರ್ಭಗೃಹಕ್ಕಿದೆ. ಲಲಾಟದಲ್ಲಿ ಗಜಲಕ್ಷ್ಮಿ ಉಬ್ಬು ಶಿಲ್ಪವನ್ನು ಕೆತ್ತಿದ್ದಾರೆ. ಗರ್ಭಗೃಹಕ್ಕೆ ಹೊಂದಿಕೊಂಡಂತಿರುವ ಅಂತರಾಳ ಬರಿದಾಗಿದೆ. ಅದರ ಬಾಗಿಲವಾಡ ಸಾದಾ ರಚನೆಯದ್ದಾಗಿದೆ.

ನಾಲ್ಕು ಕಂಬಗಳಿಂದ ಕೂಡಿರುವ ನವರಂಗವು ತಕ್ಕಮಟ್ಟಿಗೆ ವಿಶಾಲವಾಗಿದೆ. ಇಲ್ಲಿರುವ ಚೌಕಾಕಾರದ ಕಂಬಗಳ ಮಧ್ಯಭಾಗದಲ್ಲಿ ಎಂಟು ಪಟ್ಟಿಕೆಗಳನ್ನು ಕಂಡರಿಸಿದೆ. ಫಲಕ ಹಾಗೂ ಭೋದಿಗೆಗಳನ್ನು ಈ ಕಂಬಗಳು ಒಳಗೊಂಡಿವೆ. ಲಲಾಟದಲ್ಲಿ ಗಣಪನ ಉಬ್ಬುಶಿಲ್ಪವನ್ನು ಹೊಂದಿದ್ದು, ನವರಂಗದ ಬಾಗಿಲವಾಡವು ಸರಳವಾಗಿದೆ. ಇದಕ್ಕೆ ಹೊಂದಿಕೊಂಡಂತೆ ಇತ್ತೀಚಿಗೆ ಹೊಸ ಜೋಡಣೆಯಾಗಿ ಒಂದು ಮಂಟಪ ನಿರ್ಮಿತವಾಗಿದೆ.

ಅಧಿಷ್ಠಾನ ಭಾಗ ಮಣ್ಣಿನಲ್ಲಿ ಹೂತು ಹೋಗಿದೆ. ಹೊರಗೋಡೆ ನಿರಾಲಂಕಾರದಿಂದ ಕೂಡಿದೆ. ಪ್ರಾಚೀನವಾಗಿರುವ ಕದಂಬ-ನಾಗರಶೈಲಿಯ ಶಿಖರ ದೇವಾಲಯದ ಸೌಂದರ್ಯವನ್ನು ಹೆಚ್ಚಿಸಿದೆ. ಈ ಶಿಖರ ಸುಖನಾಸಿಯನ್ನು ಹೊಂದಿರುವುದು. ಸುಣ್ಣ-ಬಣ್ಣಗಳಿಂದ ದೇವಾಲಯವನ್ನು ಅಲಂಕರಣೆ ಮಾಡಿರುವುದರಿಂದ ಮೂಲ ಸೌಂದರ್ಯ ಕ್ಷೀಣಿಸಿದಂತೆ ಕಾಣುತ್ತದೆ.[೬]

**ಶಿರೂರಿನ ಮಳಗೇಶ್ವರ (ಈಶ್ವರ) ದೇವಾಲಯ**

ಮುಂಡರಗಿಯಿಂದ ೨೦.ಕಿ.ಮೀ. ದೂರದಲ್ಲಿರುವ ಶಿರೂರಿನಲ್ಲಿ ಈ ದೇವಾಲಯವಿದೆ. ಇದು ಶಿರೂರಿನ ಪ್ರಾಚೀನ ದೇವಾಲಯವಾಗಿದ್ದು ಶಾಸನೋಕ್ತ ರಾಮಲಿಂಗೇಶ್ವರ ದೇವಾಲಯವಾಗಿದೆ. ಕಲ್ಯಾಣ ಚಾಲುಕ್ಯರ ಶೈಲಿಯನ್ನು ಒಳಗೊಂಡಿರುವ ೧೧ನೇ ಶತಮಾನದ ದೇವಾಲಯವಾಗಿದೆ. ಪಶ್ಚಿಮಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ ಹಾಗೂ ಅಂತರಾಳ ಭಾಗವನ್ನು ಮಾತ್ರ ಹೊಂದಿದೆ. ನವರಂಗದ ಭಾಗವು ಸಂಪೂರ್ಣವಾಗಿ ನಾಶವಾಗಿದೆ. ಉಸುಕು ಕಲ್ಲಿನಿಂದ ನಿರ್ಮಿತವಾಗಿರುವ ಈ ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗವನ್ನು, ಛತ್ತಿನಲ್ಲಿ ಕಮಲ ವಿನ್ಯಾಸದ ಭುವನೇಶ್ವರಿಯನ್ನು ಕೆತ್ತಲಾಗಿದೆ. ಅಲ್ಲಿಯ ಅರ್ಧಗಂಬಗಳು ಗೋಚರವಾಗುತ್ತವೆ. ಗರ್ಭಗೃಹದ ದ್ವಾರವು ಸರಳಕೆತ್ತನೆಯ ಮೂರು ಶಾಖೆಗಳಿಂದ ಕೂಡಿದೆ. ನವರಂಗವು ಎಂಟು ಕಂಬಗಳಿಂದ ಕೂಡಿದೆ. ಪೂರ್ವದಿಕ್ಕಿನ ಮುಖ್ಯ ದ್ವಾರವು ಮೂರು ಶಾಖೆಗಳಿಂದ ಕೂಡಿದೆ. ನವರಂಗವು ಸಂಪೂರ್ಣ ಭಗ್ನವಾಗಿದ್ದು ಇಲ್ಲಿ ೫೦ ಸೆಂ.ಮೀ. ಎತ್ತರದ ಪಕ್ಕಕ್ಕೆ ಆಕರ್ಷಿತವಾದ ನಂದಿಶಿಲ್ಪವಿದೆ. ಬಾಗಿಲವಾಡದ ಪಕ್ಕಕ್ಕೆ ಜಾಲಂಧರಗಳನ್ನು ಅಳವಡಿಸಲಾಗಿದೆ. ದೇವಾಲಯದ ನವರಂಗ ನಾಶವಾಗಿದೆ. ಅಧಿಷ್ಠಾನ ಮಣ್ಣಿನಲ್ಲಿ ಹೂತು ಹೋಗಿದೆ. ಹೊರಗೋಡೆಗಳು ನಿರಾಲಂಕಾರದಿಂದ ಕೂಡಿವೆ. ಗುಡಿಗೆ ನಾಗರಶೈಲಿಯ ಸುಂದರವಾದ ಶಿಖರವಿದೆ. ಶಿಖರಕ್ಕಿರುವ ಕಳಸ ಮತ್ತು ಸ್ತೂಪ ಭಾಗವು ಬಿದ್ದು ಹೋಗಿದೆ.

**ಹಿರೇವಡ್ಡಟ್ಟಿಯ ಸೋಮೇಶ್ವರ ದೇವಾಲಯ**

ಮುಂಡರಗಿ ರಸ್ತೆಯಲ್ಲಿರುವ ಹಿರೇವಡ್ಡಟ್ಟಿ ಗ್ರಾಮ ಐತಿಹಾಸಿಕವಾಗಿ ಪ್ರಸಿದ್ಧವಾಗಿದೆ. ಗ್ರಾಮದಲ್ಲಿ ಪ್ರಾಚೀನ ಕೋಟೆಯ ಅವಶೇಷಗಳು ಹಾಗೂ ಕ್ರಿ.ಶ.೧೨ನೇ ಶತಮಾನಕ್ಕೆ ಸೇರಬಹುದಾದ ಮೂರು ದೇವಾಲಯಗಳು ಇವೆ. ಅವುಗಳಲ್ಲಿ ಸೋಮೇಶ್ವರ ದೇವಾಲಯವು ಸುಸ್ಥಿತಿಯಲ್ಲಿದೆ. ಹಿರೇವಡ್ಡಟ್ಟಿ ಗ್ರಾಮದ ಕೋಟೆಯೊಳಗಿನ ಪ್ರಾಚೀನ ಸೋಮೇಶ್ವರ ದೇವಾಲಯ ಗರ್ಭಗೃಹ, ನಂದಿಮಂಟಪ, ನವರಂಗವನ್ನು ಹೊಂದಿದೆ. ನವರಂಗದ ಎಡ ಮತ್ತು ಬಲಭಾಗದಲ್ಲಿ ಎರಡು ಗರ್ಭಗೃಹಗಳಿವೆ. ದೇವಾಲಯದ ತಳವಿನ್ಯಾಸ ಆಯಾತಾಕಾರದಲ್ಲಿದೆ. ಗರ್ಭಗೃಹದ ಮೇಲಿನ ಶಿಖರ ಕದಂಬ ನಾಗರ ಶೈಲಿಯಲ್ಲಿದೆ. ಗರ್ಭಗೃಹದ ನಂತರ ಅಂತರಾಳವಿದೆ. ಅಂತರಾಳದ ಬಾಗಿಲುವಾಡ ಜಾಲಾಂಧ್ರ ವಿನ್ಯಾಸದಿಂದ ಕೂಡಿದೆ. ಈ ದೇವಾಲಯದ ನವರಂಗ ವಿಶಾಲವಾಗಿದೆ. ಮಧ್ಯದಲ್ಲಿ ಚಾಲುಕ್ಯ ಶೈಲಿಯ ನಾಲ್ಕು ಸ್ತಂಭಗಳಿವೆ. ಎಡ ಮತ್ತು ಬಲಭಾಗದ ಗೋಡೆಗಳಲ್ಲಿ ಕೋಷ್ಟಕಗಳಿವೆ. ಅವುಗಳಲ್ಲಿ ಬಲಭಾಗದಲ್ಲಿ ಮಹಿಷಾಸುರಮರ್ಧಿನಿಯ ಶಿಲ್ಪವಿದೆ. ಎಡಭಾಗದಲ್ಲಿ ಯಾವ ಶಿಲ್ಪವೂ ಇಲ್ಲ. ನವರಂಗದ ಪಶ್ಚಿಮ ದಿಕ್ಕಿನಲ್ಲಿಯ ಎಡಗೋಡೆಯ ಮೇಲೆ ಎರಡು ಶಿಲಾಶಾಸನಗಳಿವೆ. ನವರಂಗದ ನಂತರ ಪ್ರವೇಶಮಂಟಪವಿದೆ. ಸುತ್ತಲೂ ಕಕ್ಷಾಸನವಿದೆ. ಒಟ್ಟಿನಲ್ಲಿ ಈ ದೇವಾಲಯ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದ್ದು, ಸುರಕ್ಷಿತವಾಗಿದೆ.

**ಚಿಕ್ಕವಡ್ನಟ್ಟಿಯ ಕಲ್ಮೇಶ್ವರ ದೇವಾಲಯ**

ಚಿಕ್ಕವಡ್ನಟ್ಟಿಯ ಕೆರೆಯ ಮೇಲಿರುವ ಈ ದೇವಾಲಯವು ಗರ್ಭಗೃಹ ಹಾಗೂ ನವರಂಗವನ್ನು ಮಾತ್ರ ಹೊಂದಿದೆ. ಅದರ ಮೂಲ ಲಕ್ಷಣಗಳು ನಾಶವಾಗಿವೆ. ಗರ್ಭಗೃಹದಲ್ಲಿ ಲಿಂಗವಿದೆ. ನವರಂಗದಲ್ಲಿ ನಂದಿಶಿಲ್ಪವನ್ನು ಇಟ್ಟಿದ್ದಾರೆ. ಗರ್ಭಗೃಹ ಹಾಗೂ ನವರಂಗದ ಎರಡು ಬಾಗಿಲವಾಡಗಳು ಅತ್ಯಂತ ಸರಳ ರಚನೆಯವು. ಗರ್ಭಗೃಹಕ್ಕೆ ಎದುರಾಗಿರುವ ಗೋಡೆಯಲ್ಲಿ ಒಂದು ಚಿಕ್ಕ ಜಾಲಾಂಧರವನ್ನು ನಿರ್ಮಿಸಲಾಗಿದೆ. ದೇವಾಲಯದ ಅಧಿಷ್ಠಾನ ಮಣ್ಣಲ್ಲಿ ಹೂತುಹೋಗಿದೆ. ಗೋಡೆಗಳಿಗೆ ಸಿಮೆಂಟ್ ಬಳಿಯಲಾಗಿದೆ. ದೇವಾಲಯದ ಮುಂಭಾಗದಲ್ಲಿ ಒಂದು ಭೈರವನ ಶಿಲ್ಪ ಹಾಗೂ ಕೆಲವು ನಾಗಶಿಲ್ಪಗಳನ್ನು ಇಟ್ಟಿದ್ದಾರೆ.[೨೯]

**ಕೊರ್ಲಹಳ್ಳಿಯ ಕಲ್ಮೇಶ್ವರ ದೇವಾಲಯ**

ಮುಂಡರಗಿಯಿಂದ ೧೦ ಕಿ.ಮೀ. ದೂರದಲ್ಲಿರುವ ಕೊರ್ಲಹಳ್ಳಿಯ ಕಲ್ಮೇಶ್ವರ ದೇವಾಲಯವು ತುಂಗಭದ್ರಾ ನದಿತೀರದ ದಡದ ಮೇಲೆ ಎತ್ತರವಾದ ಸ್ಥಳದಲ್ಲಿ ನಿರ್ಮಿಸಲ್ಪಟ್ಟಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯನ್ನು ಹೊಂದಿದ್ದು ಸುಮಾರು ಕ್ರಿ.ಶ.೧೧-೧೨ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿದೆ. ಉಸುಕು ಕಲ್ಲಿನಿಂದ ನಿರ್ಮಿತವಾದ ಈ ದೇವಾಲಯವು ಮುಖಮಂಟಪ, ನವರಂಗ ಮೂರು ಗರ್ಭಗೃಹಗಳನ್ನು ಹೊಂದಿದೆ. ಆದ್ದರಿಂದ ಸೂಕ್ಷ್ಮವಾಗಿ ದೇವಾಲಯವನ್ನು ಗಮನಿಸಿದರೆ ಅದೊಂದು ತ್ರಿಕೂಟ ಹಾಗೂ ಅದರಲ್ಲೂ ತ್ರೈಪುರುಷ ದೇವಾಲಯ ಇದ್ದಿರಬಹುದೆಂದು ಭಾಸವಾಗುತ್ತದೆ. ಮುಖ್ಯಗರ್ಭಗೃಹವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಶಿವಲಿಂಗವಿದೆ. ಛತ್ತಿನಲ್ಲಿ ಕಮಲ ಕೆತ್ತನೆ ಇದೆ. ಶಿವಲಿಂಗಕ್ಕೆ ಎದುರಾಗಿ ಸುಂದರ ಕೆತ್ತನೆಯ ನಂದಿ ಶಿಲ್ಪವಿದೆ. ಗರ್ಭಗೃಹದ ಬಾಗಿಲವಾಡವು ಸರಳ ರಚನೆಯಾಗಿದ್ದು ಬಾಗಿಲು ಚಿಕ್ಕದಾಗಿದೆ. ಅಂತರಾಳದ ಬಾಗಿಲವಾಡವು ಜಾಲಂಧರ (ಕಿಟಕಿ)ದಿಂದ ರಚಿತವಾಗಿದ್ದು, ದ್ವಾರಬಂದವು ಮೂರು ಶಾಖೆಗಳಿಂದ ಕೂಡಿದೆ. ಉತ್ತರಾಭಿಮುಖ ಮತ್ತು ದಕ್ಷಿಣಾಭಿಮುಖವಾಗಿರುವ ಗರ್ಭಗೃಹಗಳಲ್ಲಿ ಶಿಲ್ಪಗಳು ಕಂಡುಬರುವುದಿಲ್ಲ. ಬಹುತೇಕ ದೇವಾಲಯವು ಭಗ್ನಗೊಂಡಿದೆ. ದೇವಾಲಯವು ಚಾಲುಕ್ಯ ಶೈಲಿಯ ಕಟ್ಟಡವಾಗಿದ್ದು ಈ ದೇವಾಲಯದ ಹತ್ತಿರವೇ ಸತ್ಯವೀರತೀರ್ಥರ ಮಠವಿದೆ. ತುಂಗಭದ್ರಾ ನದಿಗೆ ಅಡ್ಡಲಾಗಿ ಸೇತುವೆ ಕಟ್ಟಲಾಗಿದ್ದು ಮೂಲತಃ ವಿಜಯನಗರ ಅರಸರು ಕಟ್ಟಿಸಿದ್ದಾರೆಂದು ಪ್ರತೀತಿಯಿದೆ.

**ಸಿಂಗಟಾಲೂರಿನ ವೀರಭದ್ರ ದೇವಾಲಯ**

ಮುಂಡರಗಿಯಿಂದ ದಕ್ಷಿಣಕ್ಕೆ ೨೫ ಕಿ.ಮೀ. ದೂರದಲ್ಲಿ ತುಂಗಭದ್ರಾ ನದಿಯ ತೀರದಲ್ಲಿ ವೀರಭದ್ರ ದೇವಸ್ಥಾನವಿದೆ. ನಾಡಿನ ವೀರಭದ್ರ ದೇವರುಗಳ ಆರಾಧನಾ ಕ್ಷೇತ್ರಗಳಲ್ಲಿ ಇದು ಸಹ ಹೆಚ್ಚಿನ ಜನಾಕರ್ಷಕ ಪಡೆದಿರುವ ಜಾಗೃತ ಕ್ಷೇತ್ರ. ವಿಜಯನಗರೋತ್ತರ ಕಾಲದ ಶೈಲಿಯನ್ನು ಹೊಂದಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ೧೬-೧೭ನೇ ಶತಮಾನಕ್ಕೆ ಸಂಬಂಧಿಸಿದ

ಈ ದೇವಾಯಲವು ಎತ್ತರವಾದ ಗುಡ್ಡದ ಮೇಲೆ ನಿರ್ಮಿತವಾಗಿದ್ದು ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ದೇವಾಲಯದ ಗರ್ಭಗೃಹ ಚೌಕಾಕಾರವಾಗಿದ್ದು ಅಲ್ಲಿರುವ ಚತುರ್ಭುಜದಾರಿ ವೀರಭದ್ರನ ಶಿಲ್ಪವು ಸುಮಾರು ೮೦ ಸೆಂ.ಮೀ. ಎತ್ತರವಾಗಿದೆ. ಅಂತರಾಳದಲ್ಲಿ ದಕ್ಷಬ್ರಹ್ಮನ ಶಿಲ್ಪವಿದೆ. ಅದರಲ್ಲಿ ಎರಡು ಕೋಷ್ಠಗಳಿದ್ದು, ಗಣೇಶ ಹಾಗೂ ರೇಣುಕಾಚಾರ್ಯರ ಮೂರ್ತಿಗಳಿವೆ. ದ್ವಾರಬಂಧವು ಲತಾಶಾಖೆ ಬಳ್ಳಿಯ ಅಲಂಕಾರ ಮತ್ಸ್ಯ ಅಲಂಕಾರಗಳನ್ನು ಹೊಂದಿದ್ದು ಮಂಗಳ ಫಲಕದಲ್ಲಿ ಗಣೇಶನ ಕಿರುಶಿಲ್ಪವನ್ನು ಅಳವಡಿಸಲಾಗಿದೆ. ದ್ವಾರಬಂಧದ ಕೆಳಗೆ ದ್ವಾರಪಾಲಕರ ಶಿಲ್ಪಗಳಿವೆ. ನವರಂಗವನ್ನು ಇತ್ತೀಚಿಗೆ ದುರಸ್ತಿಗೊಳಿಸಿದ್ದು, ಚಾಲುಕ್ಯ ಶೈಲಿಯ ನಾಲ್ಕು ಮಿಶ್ರ ಸ್ತಂಭಗಳಿವೆ. ಭುವನೇಶ್ವರಿ ಸರಳವಾಗಿದೆ. ನವರಂಗದಲ್ಲಿರುವ ಕಂಬಗಳು ಚಾಲುಕ್ಯ ಶೈಲಿಯ ವೃತ್ತ ಕಂಬಗಳಾಗಿವೆ. ಇದು ಕ್ರಿ.ಶ.೧೨ನೆಯ ಶತಮಾನದ ದೇವಾಲಯವಾಗಿದೆ.

**ಗುಮ್ಮಗೋಳದ ಗೋಣಿಬಸವೇಶ್ವರ ದೇವಾಲಯ**

ಮುಂಡರಗಿಯಿಂದ ೩೩ ಕಿ.ಮೀ. ಅಂತರದಲ್ಲಿರುವ ಗುಮ್ಮಗೋಳವು ತುಂಗಭದ್ರಾ ತೀರದ ಎಡ ದಂಡೆಯಲ್ಲಿದೆ. ಉತ್ತರಾಭಿಮುಖವಾಗಿರುವ ಈ ದೇವಾಲಯವು ಕ್ರಿ.ಶ.೧೬-೧೭ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿದೆ. ವಿಜಯನಗರೋತ್ತರ ಕಾಲದ ಈ ದೇವಾಲಯದ ವಿಸ್ತೀರ್ಣ ಸುಮಾರು ೫೦ ಮೀಟರ್ ಉದ್ದ, ೮ ಮೀಟರ್ ಅಗಲವಿದೆ. ವಿಶಾಲವಾದ ಪ್ರಾಂಗಣದಲ್ಲಿ ನಿರ್ಮಾಣವಾಗಿರುವ ಈ ದೇವಾಲಯಕ್ಕೆ ದೊಡ್ಡ ಮಹಾದ್ವಾರ ಇದೆ. ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವನ್ನು ನೆನಪಿಸುವಂತೆ ಈ ದ್ವಾರದ ರಚನೆ ಮಾಡಲಾಗಿದೆ. ಪ್ರವೇಶ ದ್ವಾರವು ದ್ವಿಶಾಖೆಯನ್ನು ಹೊಂದಿದ್ದು, ಅವುಗಳಲ್ಲಿ ಲತೆ, ವಜ್ರದ ಅಲಂಕಾರವನ್ನು ಬಿಡಿಸಲಾಗಿದೆ. ಲಲಾಟಬಿಂಬದಲ್ಲಿ ಯಾವುದೇ ಶಿಲ್ಪವಿಲ್ಲ. ಮುಖ್ಯದ್ವಾರದ ಇಕ್ಕೆಲಗಳಲ್ಲಿ ಮೇಲೆ ಹತ್ತಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಪ್ರವೇಶದ್ವಾರದ ಎಡ ಮತ್ತು ಬಲಭಾಗದಲ್ಲಿ ದ್ವಾರಪಾಲಕರು ನಿಂತಿರುವರು. ಪ್ರವೇಶದ್ವಾರದ ಮೇಲೆ ಭವ್ಯವಾದ ಗೋಪುರವಿದೆ. ಈ ಗೋಪುರವನ್ನು ಹಂಪೆಯ ವಿರೂಪಾಕ್ಷ ಮಂದಿರದ ಪೂರ್ವಭಾಗದ ೧೧ ಅಂತಸ್ತಿನ ಗೋಪುರವನ್ನು ನಿರ್ಮಾಣ ಮಾಡಿದ ಭಿಷ್ಟಪ್ಪಯ್ಯ ಎಂಬ ಮಹಾಪುರುಷರು ಎಂದು ಪ್ರತೀತಿ.

ಗರ್ಭಗೃಹದಲ್ಲಿ ಗೋಣಿಬಸವೇಶ್ವರರ ಗದ್ದುಗೆ ಇದೆ. ಅದರ ಮೇಲೆ ಪೀಠವನ್ನು ಹೊಂದಿದ ಶಿವಲಿಂಗವಿದೆ. ಗರ್ಭಗೃಹದ ದ್ವಾರಬಂಧವು ೨ ಶಾಖೆಗಳಿಂದ ಕೂಡಿದ್ದು, ಅವುಗಳು ಕ್ರಮವಾಗಿ ವಜ್ರ, ಪುಷ್ಪ, ಅರ್ಧಗಂಭದ ಅಲಂಕಾರಗಳಾಗಿವೆ. ಗರ್ಭಗೃಹದ ಇಕ್ಕೆಲಗಳಲ್ಲಿ ಪೂಜಾ ಗವಿಗಳಿವೆ. ಅವುಗಳಲ್ಲಿ ನಂದಿವಿಗ್ರಹ, ಶಿವಲಿಂಗವಿದೆ. ಪಕ್ಕದಲ್ಲಿಯೇ ಗೋಡೆಯ ಮೇಲೆ ಧ್ಯಾನಮುದ್ರೆಯಲ್ಲಿ ಕುಳಿತ ಶಿಲ್ಪವಿದ್ದು ಇದು ಗೋಣಿಬಸಪ್ಪದ್ದಾಗಿದೆ. ಈ ದೇವಾಲಯದ ಶಿಖರವು ದ್ರಾವಿಡ ಮಾದರಿಯದ್ದಾಗಿದೆ.

ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಗಿರುವ ಈ ದೇವಾಲಯದ ರಚನೆಯಲ್ಲಿ ವಿಜಯ ನಗರದ ವಾಸ್ತುಲಕ್ಷಣಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಎರಡು ಅಂಕಣಗಳಲ್ಲಿ ನಿರ್ಮಾಣವಾಗಿರುವ ಈ ದೇವಾಲಯವು ವಿಶಾಲವಾದ ಪ್ರಾಂಗಣ ಹೊಂದಿದ್ದು ದೇವಾಲಯಕ್ಕೆ ಸುಣ್ಣವನ್ನು ಬಳಿಯಲಾಗಿದೆ. ಎಲ್ಲಾ ಧರ್ಮಗಳ ಹಾಗೂ ಒಳಪಂಗಡಗಳ ಜೊತೆಗೆ ಸಮನ್ವಯ ಸಾಧಿಸಲು ಶ್ರಮಿಸಿದ ಗೋಣಿಬಸವೇಶ್ವರರು ಸುತ್ತಲಿನ ಹಾಗೂ ಬಹುದೂರದ ಎಲ್ಲಾ ಪ್ರದೇಶಗಳ ಜನವರ್ಗಕ್ಕೆ ಆರಾಧ್ಯ ದೈವವಾಗಿ ಪ್ರಾಮುಖ್ಯತೆಯನ್ನು ಮೆರೆದಿದ್ದಾರೆ.

ಈ ದ್ವಾರವನ್ನು ಪ್ರವೇಶಿಸುತ್ತಿದ್ದಂತೆ ನಮಗೆ ಎತ್ತರದ ಕಟ್ಟೆ, ಅಂಕಣ ಸಿಗುತ್ತದೆ. ಈ ಕಟ್ಟೆಯಲ್ಲಿ ಹಲವಾರು ಕಂಬಗಳಿವೆ. ಇವು ಕಲ್ಲಿನಿಂದ ಗಾರೆ ಹಾಗೂ ಗಚ್ಚಿನಿಂದ ನಿರ್ಮಿತವಾಗಿವೆ. ಇಲ್ಲಿರುವ ಕಂಬಗಳ ಮೇಲೆ ಅನೇಕ ಉಬ್ಬುಶಿಲ್ಪಗಳು ಹಾಗೂ ಯಾಳಿಗಳನ್ನು ನಿರ್ಮಿಸಲಾಗಿದೆ. ಅಂಕಣದಾಟಿ ಒಳಪ್ರವೇಶಿಸುತ್ತಿದ್ದಂತೆ ಒಂದು ತೀರ್ಥಕುಂಡ (ತಟಾಕವು) ಸಿಗುವದು. ಸುಮಾರು ೭-೮ ಅಡಿ ಆಳವಿರುವ ಈ ಕುಂಡದ ಸುತ್ತಲೂ ೫೪ ಕಂಬಗಳ ಸಹಿತವಾಗಿರುವ ಕಟ್ಟೆಯನ್ನು ನಿರ್ಮಿಸಲಾಗಿದೆ. ಅಲ್ಲದೇ ಈ ತೀರ್ಥದ ಹೊಂಡಕ್ಕೆ ಎದುರಾಗಿಯೇ ಗರ್ಭಗೃಹವನ್ನು ನಿರ್ಮಾಣ ಮಾಡಲಾಗಿದೆ.

### ತಾಮ್ರಗುಂಡಿ ಈಶ್ವರ ದೇವಾಲಯ

ಮುಂಡರಗಿಯಿಂದ ವಾಯುವ್ಯಕ್ಕೆ ೫ ಕಿ.ಮೀ. ದೂರದಲ್ಲಿ ಬರದೂರಿನಿಂದ ಪಶ್ಚಿಮಕ್ಕೆ ೨.ಕಿ.ಮೀ. ದೂರದಲ್ಲಿ ತಾಮ್ರಗುಂಡಿ (ಕಿಸುಗುಣ್ಡಿ) ಗ್ರಾಮವಿದೆ. ಇಲ್ಲಿರುವ ಈಶ್ವರ ದೇವಾಲಯ ಕಲ್ಯಾಣಿ ಚಾಲುಕ್ಯ ಶೈಲಿಯದ್ದಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು ಬಾಗಿಲವಾಡ ಸರಳ ಶಾಖಾಲಂಕಾರಗಳಿಂದ ಕೂಡಿದೆ. ನವರಂಗದಲ್ಲಿ ನಾಲ್ಕು ಕಂಬಗಳು ಚಾಲುಕ್ಯ ಶೈಲಿಯ ವೃತ್ತಾಕಾರದ ಕಂಬಗಳಾಗಿವೆ. ದೇವಾಲಯದ ಆಸುಪಾಸಿನಲ್ಲಿ ಸಪ್ತಮಾತೃಕೆ, ಐದು ಹೆಡೆಯ ನಾಗಶಿಲ್ಪವಿದೆ. ದೇವಾಲಯದ ಸಮೀಪದಲ್ಲಿ ಹಾಳುಬಿದ್ದಿರುವ ಹನುಮಂತನ ದೇವಾಲಯವಿದೆ. ಹಾಗೂ ಅಲ್ಲಿಯೇ ಗಜಲಕ್ಷ್ಮೀ ಮತ್ತು ಹನಮಂತನ ಬಿಡಿ ಶಿಲ್ಪಗಳಿವೆ.

### ವೈಷ್ಣವ ದೇವಾಲಯಗಳು

ಮುಂಡರಗಿ ಪರಿಸರದಲ್ಲಿ ಶೈವ ದೇವಾಲಯಗಳಂತೆ ವೈಷ್ಣವ ದೇವಾಲಯಗಳು ಕಂಡುಬರುತ್ತವೆ. ಅವುಗಳಲ್ಲಿ ಮೇವುಂಡಿಯ ವೆಂಕಟೇಶ್ವರ ದೇವಾಲಯ, ಶಿರೂರಿನ ಕೃಷ್ಣದೇವಾಲಯ, ವಿಠಲಾಪುರದ ವಿಠಲಮಂದಿರ, ಬರದೂರಿನ ಅಹೋಬಲ ನರಸಿಂಹ ದೇವಾಲಯಗಳು ಮುಂತಾದ ಪ್ರಾಚೀನ ವೈಷ್ಣವ ದೇವಾಲಯಗಳಾಗಿವೆ.

## ಮೇವುಂಡಿಯ ವೆಂಕಟೇಶ್ವರ ದೇವಾಲಯ

ಮುಂಡರಗಿಯಿಂದ ವಾಯುವ್ಯಕ್ಕೆ ೧೦.ಕಿ.ಮೀ. ದೂರದಲ್ಲಿರುವ ಮೇವುಂಡಿ (ಮೇಳವಿಡು)ಯಲ್ಲಿರುವ ವೆಂಕಟೇಶ್ವರ ದೇವಾಲಯವು ಪ್ರಾಚೀನವಾದದ್ದಾಗಿದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯವು ೧೨-೧೩ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿದೆ. ವಿಶಾಲವಾದ ಆವರಣವನ್ನು ಹೊಂದಿರುವ ಈ ದೇವಾಲಯದ ಆವರಣಕ್ಕೆ ಒಂದೇ ಹೆಬ್ಬಾಗಿಲು ನಿರ್ಮಿಸಲಾಗಿದೆ. ಈ ದೇವಾಲಯ ಗರ್ಭಗೃಹ ಹಾಗೂ ನವರಂಗವನ್ನು ಹೊಂದಿರುವುದು. ಖಡ್ಗಾಸನ (ನಿಂತಿರುವ)ದಲ್ಲಿರುವ ವಿಷ್ಣುಶಿಲ್ಪವು ಗರ್ಭಗೃಹದಲ್ಲಿದೆ. ಎತ್ತರ ಪೀಠದ ಮೇಲೆ ಈ ಶಿಲ್ಪವನ್ನಿಟ್ಟಿದ್ದಾರೆ. ನಿತ್ಯವೂ ಅದು ಪೂಜೆಗೊಳಪಡುತ್ತದೆ.

ನವರಂಗವು ನಾಲ್ಕು ಕಂಬಗಳನ್ನು ಒಳಗೊಂಡಿದೆ. ಅವುಗಳಲ್ಲಿ ಎರಡು ಚೌಕಾಕಾರದ ಉಳಿದೆರಡು ದುಂಡಾಕೃತಿಯವು (ತಿರುಗಣಿ ಕಂಬಗಳು). ವೃತ್ತಾಕಾರದ ಫಲಕ ಹಾಗೂ ಚೌಕಾಕಾರದ ಬೋಧಿಗೆಗಳನ್ನು ಕಂಬಗಳಿಗೆ ಅಳವಡಿಸಲಾಗಿದೆ. ಸುಂದರ ಅಲಂಕರಣೆಯಿಂದ ಕೂಡಿರುವ ಎರಡು ಶಿಲ್ಪಗಳನ್ನು ನವರಂಗದಲ್ಲಿ ಇಡಲಾಗಿದೆ. ಅಲ್ಲಿಯೇ ಹಾಯಾಗಿ ಕೈಯೂರಿ ಮಲಗಿರುವ ಅನಂತಶಯನ ಶಿಲ್ಪವು ಆಕರ್ಷಕವಾದುದು. ಅಲ್ಲದೇ ಇಲ್ಲಿರುವ ವಿಷ್ಣುಶಿಲ್ಪವು ಸಹ ಅಷ್ಟೇ ಸೌಂದರ್ಯದಿಂದ ಕೂಡಿದೆ. ಇಲ್ಲಿ ನಾಲ್ಕು ಶಾಸನಗಳು ಕಂಡುಬರುತ್ತವೆ. ಕ್ರಿ.ಶ. ೮೯೭ರ ಶಾಸನವು ಈ ದೇವಾಲಯವನ್ನು ಇಂದ್ರ ಸಮಾನವಾದ ದೇಗುಲವೆಂದು ವರ್ಣಿಸಿದೆ.

## ಶಿರೂರಿನ ಕೃಷ್ಣದೇವಾಲಯ

ಮುಂಡರಗಿಯಿಂದ ವಾಯುವ್ಯಕ್ಕೆ ೨೦ ಕಿ.ಮೀ. ಅಂತರದಲ್ಲಿರುವ ಶಿರೂರಿ (ಸಿರಿವೂರು)ನ ದಕ್ಷಿಣ ದಿಕ್ಕಿನಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾದ ಕೃಷ್ಣ ದೇವಾಲಯವು ವಿಜಯನಗರ ಪೂರ್ವಕಾಲದ ಶೈಲಿಯನ್ನು ಹೊಂದಿದೆ. ಸುಮಾರು ೧೩-೧೪ನೇ ಶತಮಾನಕ್ಕೆ ಸಂಬಂಧಿಸಿದ ಈ ದೇವಾಯಲವು ಎತ್ತರದ ಕಟ್ಟೆಯ ಮೇಲೆ ನಿರ್ಮಾಣವಾಗಿದೆ. ದೇವಾಲಯವನ್ನು, ಮೆಟ್ಟಿಲುಗಳನ್ನು ಏರಿಕೊಂಡು ಪ್ರವೇಶಿಸಬೇಕಾಗುತ್ತದೆ. ಗರ್ಭಗೃಹ ಹಾಗೂ ನವರಂಗ ಇಲ್ಲಿ ಕಂಡುಬರುತ್ತದೆ. ದೇವಾಲಯಕ್ಕೆ ನವರಂಗದ ಮೂಲಕ ಎರಡು ಪ್ರವೇಶ ದ್ವಾರಗಳಿವೆ. (ಪೂರ್ವ ಹಾಗೂ ಉತ್ತರ) ಸ್ಥಳೀಯವಾಗಿ ಸಿಗುವ ಉಸುಕು ಕಲ್ಲನ್ನು ದೇವಾಲಯದ ರಚನೆಯಲ್ಲಿ ಬಳಕೆ ಮಾಡಲಾಗಿದೆ.

ಗರ್ಭಗೃಹದಲ್ಲಿ ಸುಂದರ ಕೆತ್ತನೆಯ ೬ ಅಡಿ ಎತ್ತರದ ಕೃಷ್ಣ (ಮುರುಳಿ ಮೋಹನ) ಶಿಲ್ಪವಿದೆ. ಗರ್ಭಗೃಹದ ದ್ವಾರವು ಪತ್ರ, ಕುಜ್ಜ, ಸ್ಥಂಭ, ಶಾಖೆಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ಗರ್ಭಗೃಹದಲ್ಲಿ ಸುಂದರವಾದ ಭುವನೇಶ್ವರಿಯನ್ನು ಕೆತ್ತಲಾಗಿದೆ. ನಾಲ್ಕುಕಂಬಗಳಿಂದ ಕೂಡಿರುವ ಚೌಕಾಕಾರದ ನವರಂಗವು ಸರಳ ಕೆತ್ತನೆಯಿಂದ ಕೂಡಿದೆ. ಬಳಪದ ಕಲ್ಲಿನಿಂದ ರಚಿತವಾಗಿರುವ ಈ ಕಂಬಗಳಲ್ಲಿ ಎರಡು ಗಂಟೆಯಾಕಾರದವುಗಳಾದರೆ ಇನ್ನೆರಡು

ಕಮಲದ ಮೊಗ್ಗನ್ನು ತಿರುವಿ ಇಟ್ಟಾಗ ತೋರುವ ಮಾದರಿಯಲ್ಲಿ ಇವೆ. ಈ ಎಲ್ಲಾ ಕಂಬಗಳಿಗೆ ವೃತ್ತಾಕಾರದ ಫಲಕ ಹಾಗೂ ಚೌಕಾಕಾರದ ಭೋಧಿಗೆಗಳನ್ನು ಅಳವಡಿಸಲಾಗಿದೆ. ನವರಂಗದ ಪೂರ್ವಭಾಗಕ್ಕಿರುವ ಮುಖ್ಯದ್ವಾರವು ಸರಳ ಕೆತ್ತನೆಯ ನಾಲ್ಕು ಶಾಖೆಗಳಿಂದ ಕೂಡಿದೆ. ಲಲಾಟದಲ್ಲಿ ಯಾವುದೇ ಶಿಲ್ಪವಿಲ್ಲ. ದೇವಾಲಯದ ಉತ್ತರ ದಿಕ್ಕಿನ ದ್ವಾರವು ನಾಲ್ಕುಶಾಖೆಗಳಿಂದ ಕೂಡಿದ್ದು ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ದೇವಾಲಯದ ಹೊರಭಾಗದಲ್ಲಿ, ಕಪೋತದ ಕೆಳಭಾಗದ ಭಿತ್ತಿಯಲ್ಲಿ ಸುಂದರ ಕೆತ್ತನೆಯ ಮಿಥುನ ಶಿಲ್ಪಗಳನ್ನು, ಗೋಪಿಕೆಯರೊಡನೆ ಕೃಷ್ಣ, ಗೋಪಿಕೆಯರ ಬಟ್ಟೆ ಕದ್ದ ಕೃಷ್ಣ, ಮಂಗಗಳ ಕಪಿ ಚೇಷ್ಟೆ, ಕೃಷ್ಣನ ಕಾಳಿಂಗಮರ್ಧನ, ಕೃಷ್ಣನ ಕಾಳಿ ಸವಾರಿ, ಲಕ್ಷ್ಮಿ-ನರಸಿಂಹ  ಮುಂತಾದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಉಳಿದಂತೆ ಭಿತ್ತಿ ಸರಳವಾಗಿದೆ. ಶಿಖರ ಭಾಗವು ಭಗ್ನವಾಗಿದೆ. ದೇವಾಲಯದ ಅಧಿಷ್ಠಾನ ಭಾಗ ಸಾದಾ ರಚನೆಯಿಂದ ಕೂಡಿದೆ. ಒಟ್ಟಾರೆ ಗುಡಿಯ ನಿರ್ಮಾಣದಲ್ಲಿ ಪ್ರಯೋಗವಾಗಿರುವ ಮಾದರಿಯನ್ನು ಗಮನಿಸಿದರೆ ಈ ದೇವಾಲಯವು ಕಲ್ಯಾಣದ ಚಾಲುಕ್ಯರ ಕಾಲನಂತರವೇ ನಿರ್ಮಾಣವಾಗಿದ್ದಿರಬಹುದೆಂದು ಊಹಿಸಬಹುದು.

**ವಿಠಲಾಪುರದ ವಿಠಲಮಂದಿರ**

ಈ ಪರಿಸರದ ವಿಠಲಾಪುರದಲ್ಲಿರುವ ವಿಠಲಮಂದಿರವು ಸುಮಾರು ೧೫ನೇ ಸತಮಾನದಲ್ಲಿ ನಿರ್ಮಾಣವಾಗಿದ್ದು, ಇತ್ತೀಚೆಗೆ ಇದು ಪುನರ್ ನಿರ್ಮಾಣಗೊಂಡಿದೆ. ಅದರ ತಳಪಾಯದಲ್ಲಿ ಗರ್ಭಗೃಹ ನವರಂಗಗಳಿವೆ. ಇಲ್ಲಿ ಕಂಡುಬರುವ ಮುಖ್ಯವಾದ ಮಾಹಿತಿ ಎಂದರೆ ನವರಂಗದಲ್ಲಿ ಭಿಷ್ಟಪ್ಪಯ್ಯನ ಶಿಲ್ಪವಿದೆ. ಈತನು ಹಂಪೆಯ ವಿರೂಪಾಕ್ಷ ದೇವಾಲಯದ ಮುಂದಿನ ಗೋಪುರ ನಿರ್ಮಿಸಲು ಕಾರಣನಾಗಿದ್ದಾನೆ. ಈತನೊಬ್ಬ ಪವಾಡ ಪುರುಷ ಹಾಗೂ ಈತನು ಪಂಚಲೋಹದ ಪೀಠದಲ್ಲಿರುವ ಪಾರಜಬಂಧ ಶಿವಲಿಂಗವನ್ನು ಸ್ಥಾಪಿಸಿದನು. ಈ ಪಾರಜಬಂಧ ಶಿವಲಿಂಗ ಸುಮಾರು ೨೪-೨೫ ಕಿಲೋಗ್ರಾಮ್ ಭಾರವಿದ್ದು ಇಂತಹ ಪಾರಜಬಂಧ ಶಿವಲಿಂಗ ಕಾಶಿಯಲ್ಲಿ ಬಿಟ್ಟರೆ ಬೇರೆ ಯಾವ ಸ್ಥಳದಲ್ಲಿಯೂ ಕಂಡುಬರುವುದಿಲ್ಲವೆಂದು ಹೇಳುತ್ತಾರೆ. ದೇವಾಂಶಸಂಭೂತರೆಂದು ಪರಿಗಣಿಸಲ್ಪಟ್ಟ ಭಿಷ್ಟಪ್ಪಯ್ಯನವರ ವಿಗ್ರಹ, ಅತ್ಯಂತ ಸುಂದರವಾದ ರಸಲಿಂಗ ವಿಠಲನೊಂದಿಗೆ ಪೂಜೆಗೊಳ್ಳುತ್ತಾ ಬಂದಿದೆ.

**ಶಾಕ್ತ ದೇವಾಲಯ: ಡೋಣೆಯ ಡೋಣೆಕವ್ವೆ**

ಡೋಣೆಯ ಶಾಕ್ತ ದೇವಾಲಯವಾದ ಡೋಣೆಕವ್ವೆ ಗುಡಿಯು ಪ್ರಾಚೀನ ಕಾಲದ್ದಾಗಿದ್ದು ಪೂರ್ವಾಭಿಮುಖವಾಗಿದೆ. ಗ್ರಾಮದ ಪೂರ್ವಕ್ಕಿರುವ ಈ ದೇವಾಲಯ ಹೊರಗೋಡೆ ಹಾಗೂ ಅಧಿಷ್ಠಾನದ ಭಾಗವನ್ನು ಬಿಟ್ಟರೆ ಮೇಲ್ಛಾವಣಿ ಹಾಗೂ ದೇವಾಲಯದ ಒಳಭಾಗ ಸಂಪೂರ್ಣವಾಗಿ ಹೊಸದಾಗಿ ನಿರ್ಮಾಣವಾಗಿದೆ. ಗ್ರಾಮದೇವತೆಯಾದ ಡೋಣೆಕವ್ವೆ ಗ್ರಾಮದ ಎಲ್ಲರ ಆರಾಧ್ಯ ದೈವ. ನಾಲ್ಕು ಅಡಿ ಎತ್ತರದ ವಿಗ್ರಹವು ದೇವಾಲಯದಲ್ಲಿದ್ದು ಅದನ್ನು ನಿತ್ಯವು ಪೂಜಿಸುತ್ತಾರೆ. ವಿಗ್ರಹವು

ಸಹ ಇತ್ತೀಚಿಗೆ ನಿರ್ಮಿಸಲ್ಪಟ್ಟಂತಹುದು. ಹಳೆಯ ಶಿಲ್ಪವನ್ನು ಅಲ್ಲಿಯೇ ಇಡಲಾಗಿದೆ. ಇದೊಂದು ಸ್ತ್ರೀದೇವತೆಯಾಗಿದ್ದರೂ ಪುರುಷ ರೂಪದಲ್ಲಿ ಇದನ್ನು ಅಲಂಕಾರಗೊಳಿಸಿ ಆರಾಧಿಸುತ್ತಾರೆ.

ಮಂಟಪದಲ್ಲಿರುವ ಕಂಬಗಳು ಸಹ ಹೊಸದಾಗಿವೆ. ಸಾದಾ ರಚನೆಯಿಂದ ಕೂಡಿರುವ ಬಾಗಿಲವಾಡದ ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಇದರ ಮೇಲೆ ಮುಂಚಾಚಿದ ತೋರಣ ನಿರ್ಮಿಸಲಾಗಿದೆ. ದೇವಾಲಯಕ್ಕೆ ಶಿಖರವಿಲ್ಲ. ಆವರಣದಲ್ಲಿ ನಾಗಶಿಲ್ಪ ಹಾಗೂ ತ್ರುಟಿತ ಬಿಡಿ ಶಿಲ್ಪವೊಂದನ್ನು ಇಡಲಾಗಿದೆ. ಡೋಣಿಕವ್ವೆ ಗುಡಿಗೆ ವಿಶಾಲವಾದ ಪ್ರಾಂಗಣವಿದೆ. ಗುಡಿಯ ಮುಂಭಾಗದಲ್ಲಿ ಒಂದು ಶಿಖರವನ್ನು ನಿರ್ಮಿಸಿದ್ದಾರೆ. ಈ ಶಿಬಾರದ ಮೇಲೆ ಕ್ರಿ.ಶ. ೧೨೭೬ರ ಶಾಸನವಿದೆ.[೬೧] ಶಿಬಾರಕ್ಕೆ ಬಳಸಿರುವ ಎರಡು ಕಂಬಗಳು ಚೌಕಾಕಾರವಾಗಿದ್ದು ಮಧ್ಯಭಾಗದಲ್ಲಿ ಹದಿನಾರು ಪಟ್ಟಿಕೆಗಳ ಅಲಂಕಾರ ಮಾಡಿದ್ದಾರೆ. ಎರಡು ಕಂಬಗಳನ್ನು ಒಳಗೊಂಡಂತೆ ಒಂದು ತೊಲೆಯನ್ನು ಮೇಲ್ಭಾಗದಲ್ಲಿ ಇಡಲಾಗಿದೆ.

ಹೀಗೆ ಈ ಹಿಂದೆ ವಿವರಿಸಿದ ದೇವಾಲಯಗಳಷ್ಟೇ ಅಲ್ಲದೆ ಕೆಲವು ಚಿಕ್ಕಪುಟ್ಟ ಪ್ರಾಚೀನ ದೇವಾಲಯಗಳಿವೆ. ಅವುಗಳಲ್ಲಿ ಪೇಠಾಲೂರಿನ ಅನಂತಶಯನಗುಡಿ, ಬಿದರಳ್ಳಿಯ ಅಶ್ವತ್ಥನಾರಾಯಣ, ಬೂದಿಹಾಳದ ಈಶ್ವರ ದೇವಾಲಯ, ಮಲ್ಲಾಪುರದ ರಾಮಲಿಂಗಯ್ಯ (ಮಲ್ಲಯ್ಯ), ಮೇವುಂಡಿಯ ಈಶ್ವರ ದೇವಾಲಯ, ಶಿರೂರಿನ ಸಿದ್ದೇಶ್ವರ ದೇವಾಲಯ, ಹಳೆ ಸಿಂಗಟಾಲೂರಿನ ಕಲ್ಮೇಶ್ವರ, ಚುರ್ಚಿಹಾಳದ ಕಲ್ಮೇಶ್ವರ ದೇವಾಲಯ, ಕದಾಂಪುರದ ಈಶ್ವರ ದೇವಾಲಯ, ಮುಷ್ಠಿಕೊಪ್ಪದ ವೆಂಕಟೇಶ್ವರ ದೇವಾಲಯ, ಹಾರೂಗೇರಿಯ ಕಲ್ಲಪ್ಪಯ್ಯ, ಸುರಪುರದ ಈಶ್ವರ ದೇವಾಲಯಗಳು ಪ್ರಮುಖವಾಗಿದೆ.

### ಬಸದಿಯ ಅವಶೇಷಗಳು

ಮುಂಡರಗಿ ಪರಿಸರದಲ್ಲಿ ಆಡಳಿತವನ್ನು ನಿರ್ವಹಿಸಿದ ವಿವಿಧ ರಾಜಮನೆತನಗಳು ಸರ್ವಧರ್ಮಗಳಿಗೂ ಸಹ ಆದ್ಯತೆ ನೀಡಿದ್ದರು. ಇದಕ್ಕೆ ಪುರಾವೆಯಾಗಿ ಈ ಪರಿಸರದಲ್ಲಿ ಗೋಚರವಾಗುವಂತಹ ಜೈನಾವಶೇಷಗಳು ಹಾಗೂ ಶಾಸನಗಳು ಮುಖ್ಯವಾಗಿವೆ. ಮೇವುಂಡಿಯಲ್ಲಿ ಜೈನ ತೀರ್ಥಂಕರರ ವಿಗ್ರಹಗಳು ಹಾಗೂ ಪಾದಗಟ್ಟೆಗಳಿವೆ. ಹಾಗೆಯೇ ಡಂಬಳದಲ್ಲಿ ಜೈನ ಬಸದಿಯ ಅವಶೇಷಗಳಿವೆ. ಕಲಕೇರಿಯ ಕ್ರಿ.ಶ.೧೨ನೇ ಶತಮಾನದ ಶಾಸನ[೬೨] ಹಾಗೂ ಡೋಣಿ ಗ್ರಾಮದ ಮೂರು ಶಾಸನಗಳಲ್ಲಿ ಪಾರ್ಶ್ವನಾಥ ಬಸದಿಯನ್ನು ನಿರ್ಮಾಣ ಮಾಡಿದುದರ ಕುರಿತು ಹಾಗೂ ದಾನ ನೀಡಿದ ವಿಷಯವನ್ನು ಒಳಗೊಂಡಿವೆ. ಪ್ರಸ್ತುತ ಅಂತಹ ಯಾವುದೇ ಜೈನಬಸದಿಗಳು ಈಗ ಆ ಸ್ಥಳಗಳಲ್ಲಿ ಇಲ್ಲವಾಗಿವೆ. ಆದರೆ ಅವುಗಳ ಅವಶೇಷಗಳನ್ನು ಕಾಣಬಹುದು.

### ಬೌದ್ಧವಿಹಾರ

ಈ ಪರಿಸರದಲ್ಲಿ ಬೌದ್ಧಧರ್ಮ ಕೂಡ ಅಸ್ತಿತ್ವದಲ್ಲಿತ್ತು ಎನ್ನುವುದಕ್ಕೆ ಡಂಬಳದ ಬೌದ್ಧವಿಹಾರ

ಹಾಗೂ ಕೆಲವು ಶಾಸನಗಳ ಆಧಾರಗಳಿವೆ. ಇವುಗಳಿಂದ ಡಂಬಳ ಈ ಹಿಂದೆ ಕರ್ನಾಟಕದಲ್ಲಿಯ ಪ್ರಮುಖ ಬೌದ್ಧ ಕೇಂದ್ರಗಳಲ್ಲಿ ಒಂದಾಗಿತ್ತೆದು ಇಲ್ಲಿಯ ತಾರಾಭಗವತಿ ವಿಗ್ರಹದಿಂದ ತಿಳಿದುಬರುತ್ತದೆ. ಕರ್ನಾಟಕದ ಹಲವೇ ತಾರಾಭಗವತಿ ವಿಗ್ರಹ ಸ್ಥಳಗಳಲ್ಲಿ[೩೩] ಡಂಬಳವೂ ಒಂದು. ಆದರೀಗ ಈ ವಿಹಾರಗಳು ಸಂಪೂರ್ಣ ಮಣ್ಣಿನಲ್ಲಿ ಮುಚ್ಚಿ ಹೋಗಿದೆ. ಇಲ್ಲಿಯ ಜೈನಬಸದಿಯ ಎರಡುಪಾರ್ಶ್ವದ ಮೇಲಿರುವ ಶಾಸನವನ್ನು ನಿರ್ಮಿಸಿ, ಬೌದ್ಧ ಭಾಷೆಗಳಿಗೆ ದಾನ ನೀಡಿದ ವಿಷಯ ತಿಳದುಬರುತ್ತದೆ. 'ನಮೋ ಬುದ್ಧಾಯ' ಎಂದು ಪ್ರಾರಂಭವಾಗುವ ಈ ಶಾಸನದುದ್ದಕ್ಕೂ ಬುದ್ಧನಿಗಿಂತ ತಾರಾಭಗವತಿಯೇ ಹೆಚ್ಚು ವರ್ಣಿತಳಾಗಿದ್ದಾಳೆ. ಶಾಸನದ ಮೇಲ್ಭಾಗದಲ್ಲಿ ತಾರಾಭಗವತಿ ಹಾಗೂ ಬುದ್ಧನ ಕಿರುಶಿಲ್ಪಗಳಿವೆ.

### ೩.೩. ಶಿಲ್ಪಾವಶೇಷಗಳು

ಜಗತ್ತಿನ ಶಿಲ್ಪಕಲೆಯ ಇತಿಹಾಸದಲ್ಲಿ ಭಾರತೀಯ ಶಿಲ್ಪಕಲೆಯು ಉನ್ನತವಾದ ಸ್ಥಾನಮಾನವನ್ನು ಪಡೆದುಕೊಂಡಿದೆ. ಪ್ರಾಚೀನ ಕಾಲದ ಭಾರತೀಯ ಶಿಲ್ಪಿಗಳು ಶಿಲ್ಪ ರಚನೆಯ ವಿಷಯದಲ್ಲಿ ಉತ್ಕೃಷ್ಟತೆಯನ್ನು ಸಾಧಿಸಿದ್ದಾರೆ. ಇಲ್ಲಿಯ ಶಿಲ್ಪಗಳು ಹೊರಸೂಸುವ ಉತ್ಕಟವಾದ ಭಾವನೆಗಳು, ದೈವತ್ವದ ಹಿನ್ನಲೆಯಲ್ಲಿ ಅಗೋಚರ ಶಕ್ತಿಯನ್ನು ಬಿಂಬಿಸುತ್ತವೆ. ಇಂಥ ಶಿಲ್ಪಗಳನ್ನು ಪ್ರಪಂಚದ ಯಾವ ಶಿಲ್ಪಗಳಲ್ಲಿಯೂ ಕಾಣುವುದಿಲ್ಲ.[೩೪] ಈ ಹಿನ್ನಲೆಯಲ್ಲಿ ವಾಸ್ತುಶಿಲ್ಪ (ದೇವಾಲಯ)ಗಳಷ್ಟೇ ಪ್ರಾಮುಖ್ಯತೆಯನ್ನು ಮೂರ್ತಿಶಿಲ್ಪಗಳು ಸಹ ಹೊಂದಿವೆ. ದೇವಾಲಯಗಳ ಸೌಂದರ್ಯವನ್ನು ಹೆಚ್ಚಿಸಲು ಶಿಲ್ಪಗಳು ತುಂಬಾ ಸಹಾಯಕಾರಿಯಾಗಿವೆ. ಇವು ಸಹ ಮತಧರ್ಮಗಳ ತಳಹದಿಯ ಮೇಲೆ ಹುಟ್ಟಿಕೊಂಡಿರುವಂತವುಗಳಾಗಿವೆ.

ಒಂದು ನೈಜ ಅಥವಾ ಕಾಲ್ಪನಿಕ ಆಕೃತಿಯನ್ನು ರಚಿಸಲು ಒಂದು ಮಾಧ್ಯಮ ಅವಶ್ಯಕ. ಹೀಗಾಗಿ ಪುರಾತತ್ವ ಅಧ್ಯಯನದಲ್ಲಿ ಶಿಲ್ಪಾಧ್ಯಯನವು ಮುಖ್ಯವಾಗಿದೆ. ಶಿಲ್ಪವನ್ನು ಕೆತ್ತುವುದರ ಮೂಲಕ ಕಲ್ಪನೆಯು ನೈಜತೆಯನ್ನು ಪಡೆಯುತ್ತದೆ. ಶಿಲ್ಪವೆನ್ನುವದು ಉದ್ದ, ಅಗಲ ಹಾಗೂ ದಪ್ಪಗಳೆಂಬ ಮೂರು ಮಾನಗಳನ್ನು ಹೊಂದಿರುತ್ತದೆ. ವಿಗ್ರಹಗಳನ್ನು ಸಾಮಾನ್ಯವಾಗಿ 'ಮೂರ್ತಿಶಿಲ್ಪ' ಎನ್ನುತ್ತಾರೆ. ಇವುಗಳಲ್ಲಿ ಬಿಡಿಶಿಲ್ಪಗಳು ಪೂಜೆಗೊಳಪಡುವ ಮೂರ್ತಿಗಳು, ಕಂಬ, ಭಿತ್ತಿ ಹಾಗೂ ಶಿಖರಗಳಲ್ಲಿರುವ ಉಬ್ಬುಶಿಲ್ಪಗಳು ಹಾಗೂ ಶಿಲಾಫಲಕಗಳ ಮೇಲೆ ಕೆತ್ತಿದ ಆಕೃತಿಗಳೆಲ್ಲವು ಶಿಲ್ಪಗಳಲ್ಲಿಯೇ ಬರುತ್ತವೆ. ಶಿಲ್ಪಗಳನ್ನು ಮುಖ್ಯವಾಗಿ ಶಿಲೆ, ಮರ, ಲೋಹ, ಮಣ್ಣು ಹಾಗೂ ಮೇಣಗಳಿಂದ ತಯಾರಿಸಲಾಗುತ್ತದೆ. ಶಿಲ್ಪಗಳ ತಯಾರಿಕೆಯಲ್ಲಿರುವ ಪ್ರಮಾಣ ಹಾಗೂ ಗಾತ್ರಗಳು ಸೌಂದರ್ಯವನ್ನು ನಿರ್ಧರಿಸುತ್ತವೆ. ಶಿಲ್ಪಗಳಿಗೆ ದೇವಾಲಯಗಳಿಗಿಂತ ಪುರಾತನವಾದ ಇತಿಹಾಸವಿದೆ. ಮುಖ್ಯವಾಗಿ ಶಿಲ್ಪಗಳನ್ನು ಪೂಜೆಗಾಗಿ, ಕಲೆಗಾಗಿ ಹಾಗೂ ಜನಸಾಮಾನ್ಯರ ಮನದನಿಯನ್ನು ತನಿಸಲು ನಿರ್ಮಾಣಮಾಡುತ್ತಿದ್ದರು.

ಪ್ರಾಚೀನ ಕಾಲದಿಂದಲೂ ಮೂರ್ತಿಶಿಲ್ಪವು ದೇವಾಲಯದ ಒಂದು ಅವಿಭಾಜ್ಯ ಅಂಗವಾಗಿದೆ. ಗರ್ಭಗುಡಿಯಲ್ಲಿಯ ಪ್ರಧಾನ ಮೂಲದ ಮೂರ್ತಿ, ಸಭಾಮಂಟಪದ ಹೊರಗೋಡೆಯ ಮಧ್ಯಭಾಗದಲ್ಲಿ, ಮಾಡಿನಂಚಿನ ಮೇಲೆ, ಕಟಾಂಜನದಂತಿರುವ 'ಹಾರ'ದ ಹೊರಬದಿಯಲ್ಲಿ, ಶಿಖರ ದಲ್ಲಿ, ಮುಖಮಂಟಪ, ಸಭಾಮಂಟಪದ ಕಂಬಗಳ ಮೇಲೆ, ಬಾಗಿಲು ಚೌಕಟ್ಟಿನಲ್ಲಿ, ಛತ್ತಿನಲ್ಲಿ ವಿವಿಧ ಪ್ರಕಾರಗಳ ಉಬ್ಬುಶಿಲ್ಪಗಳಿರುತ್ತವೆ. ಇನ್ನೂ ಕೆಲವು ಮೂರ್ತಿಶಿಲ್ಪಗಳನ್ನು ಕೋಷ್ಠದಲ್ಲಿ, ದೇವಾಲಯದ ಗೋಡೆಗಳಲ್ಲಿ ಅಲಂಕಾರಿಕವಾಗಿ ಕೆತ್ತಿರುವುದನ್ನು ಗುರಿತಿಸಬಹುದು. ಈ ರೀತಿಯ ಮೂರ್ತಿಶಿಲ್ಪಗಳು ಆಗಿನ ಕಾಲದ ಸಾಮಾಜಿಕ ಜೀವನದ ಮತ್ತು ಉಡುಗೆ-ತೊಡುಗೆಗಳ, ಆಭರಣ ಗಳ ಅಲಂಕಾರಗಳನ್ನು ಪ್ರತಿಬಿಂಬಿಸುತ್ತವೆ. ಇದಲ್ಲದೆ ಇವು ಆಗಿನ ಆಳರಸರ ಧಾರ್ಮಿಕ ಅಭಿರುಚಿಯನ್ನು ಮತ್ತು ಅವರು ಪ್ರೋತ್ಸಾಹಿಸಿದ ಧರ್ಮವನ್ನು ಪ್ರತಿಬಿಂಬಿಸುವ ಸಾಕ್ಷಿಗಳಾಗಿವೆ. ಹೀಗೆ ಈ ರೀತಿಯ ಮೂರ್ತಿಶಿಲ್ಪದ ಕಲ್ಪನೆಗಳು ಭಾರತದಲ್ಲಿ ಸಿಂಧೂ ನಾಗರಿಕತೆಯಿಂದಲೂ ಕಂಡು ಬರುತ್ತಿವೆ. ಪ್ರಾರಂಭದಲ್ಲಿ ರಚನೆಯಾದ ಗೂಳಿ, ಲಿಂಗ, ಪಶುಪತಿ, ಶಿವ, ನೃತ್ಯಮಾಡುವ ಸ್ತ್ರೀ, ಮುಂತಾದ ಶಿಲ್ಪಗಳು ಎಂದೆಂದಿಗೂ ಅಧ್ಯಯನಗಳ ಚರ್ಚೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ. ಕರ್ನಾಟಕದಲ್ಲಿಯು ಇಂತಹ ಮೂರ್ತಿಶಿಲ್ಪಗಳ ರಚನೆಯನ್ನು ಶಾತವಾಹನ ಮತ್ತು ಕದಂಬರ ಕಾಲದಿಂದಲೂ ಕಾಣಬಹುದು.

ಈ ನಿಟ್ಟಿನಲ್ಲಿ ಈ ಪರಿಸರಲ್ಲಿಯ ವಿಭಿನ್ನವಾದ ಶೈವ, ವೈಷ್ಣವ, ಶಾಕ್ತ, ಜೈನ ಹಾಗೂ ಬೌದ್ಧ ಶಿಲ್ಪಾವಶೇಷಗಳು ಮಹತ್ವ ಪಡೆದುಕೊಂಡಿವೆ.

**ಶೈವ ಶಿಲ್ಪಗಳು**

**ಶಿವಲಿಂಗಗಳು**

ಮುಂಡರಗಿಯ ಗುಡ್ಡದ ಹಾಸುಬಂಡೆಗಲ್ಲಿನ ಮೇಲೆ ವಿಶಿಷ್ಟವಾದ ನೂರೊಂದು ಶಿವಲಿಂಗಗಳು ಕಂಡುಬರುತ್ತವೆ. ಇವುಗಳನ್ನು ಶಿಲಾನೆಲದ ಮೇಲೆ ಹತ್ತು ಸಾಲುಗಳಲ್ಲಿ ತಲಾ ಒಂದು ಸಾಲಿನಲ್ಲಿ ಹತ್ತು ಶಿವಲಿಂಗಗಳನ್ನು ಕಂಡರಿಸಲಾಗಿದೆ. ಮಧ್ಯದಲ್ಲಿ ಒಂದು ಶಿವಲಿಂಗವಿದೆ. ಇದೊಂದು ಈ ಪರಿಸರದ ವೈಶಿಷ್ಟ್ಯತೆಗಳಲ್ಲಿ ಒಂದೆನಿಸಿದೆ.

ಡಂಬಳದ ದೊಡ್ಡಬಸಪ್ಪ ದೇವಾಲಯದ ಗರ್ಭಗೃಹದಲ್ಲಿ ೯೦ ಸೆಂ.ಮೀ. ಎತ್ತರವಾದ ಶಿವಲಿಂಗವಿದೆ. ಅದಕ್ಕೆ ಬ್ರಹ್ಮಸೂತ್ರವನ್ನು ಸ್ಪಷ್ಟವಾಗಿ ರೇಖಿಸಲಾಗಿದೆ. ಇಲ್ಲಿ ಪಾಣಿವಾಟ ಸಂಪೂರ್ಣ ಭಗ್ನವಾಗಿದೆ. ಇದೇ ಶೈಲಿಯ ಶಿವಲಿಂಗವನ್ನು ಡಂಬಳದ ಸೋಮೇಶ್ವರದಲ್ಲಿಯೂ ಕಾಣಬಹುದು. ಅಲ್ಲಿ ಪಾಣಿವಾಟ ಸುಂದರವಾಗಿದ್ದು, ಜಲನಾಳ ಮತ್ತು ಬ್ರಹ್ಮಸೂತ್ರ ಸ್ಪಷ್ಟವಾಗಿದೆ. ಈ ನಾಡಿನ ಬಹುತೇಕ ಶಿವಲಿಂಗಗಳು ಒಂದೇ ಮಾದರಿಯ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿವೆ.

ನಾಗರಹಳ್ಳಿಯ ಪಂಚಲಿಂಗೇಶ್ವರ ದೇವಾಲಯದ ಪಂಚಲಿಂಗವೆಂದು ಕರೆಯುವ ಶಿವಲಿಂಗವು ಒಂದೇ ವೃತ್ತಾಕಾರದ ಪಾಣೀಪೀಠದ ಮೇಲೆ ದೊಡ್ಡದಾದ ಶಿವಲಿಂಗವನ್ನು ಹಾಗೂ ವಾಯುವ್ಯ, ಈಶಾನ್ಯ, ಆಗ್ನೇಯ ಮತ್ತು ನೈಋತ್ಯ ದಿಕ್ಕುಗಳಲ್ಲಿ ಒಂದೊಂದು ಕಿರುಲಿಂಗವನ್ನು ಕೆತ್ತಿದ್ದು ಪಂಚಮುಖಿ ಶಿವನು ಲಿಂಗರೂಪದಲ್ಲಿ ಮುಖ ಮಾಡಿರುವಂತೆ ಕೆತ್ತಲಾಗಿದೆ.

ಚತರ್ಮುಖ ಶಿವಲಿಂಗವೊಂದು ಬಿದರಳ್ಳಿಯಲ್ಲಿ ಕಂಡುಬಂದಿದ್ದು ಶಿವಲಿಂಗದ ನಾಲ್ಕು ಬದಿಯಲ್ಲಿ ಶಿವನ ಶಿರೋಭಾಗವನ್ನು ತೋರಿಸಿದೆ. ಇಂತಹ ಚತುರ್ಮುಖ ಲಿಂಗಗಳು ಈ ಭಾಗದಲ್ಲಿ ವಿರಳ ಹಾಗಾಗಿ ಈ ಶಿಲ್ಪವು ವಿಶಿಷ್ಟವಾಗಿದೆ.

**ನಂದಿ**

ಶಿವನ ವಾಹನ ವೃಕಭವಾಗಿದ್ದರಿಂದ ಶೈವ ದೇವಾಲಯಗಳಲ್ಲಿ ಶಿವಲಿಂಗದ ಎದುರಿಗೆ ನಂದಿಯನ್ನು ಪ್ರತಿಷ್ಠಾಪಿಸಿದ್ದಾರೆ. ಈ ಪದ್ಧತಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಡಂಬಳದ ದೊಡ್ಡಬಸಪ್ಪ ದೇವಾಲಯದ ಮುಖಮಂಟಪದಲ್ಲಿ ಸುಮಾರು ೨ ಅಡಿ ಎತ್ತರವಿರುವ ಅತಿ ಸುಂದರವಾದ ನಂದಿ ವಿಗ್ರಹವಿದೆ. ಕಿರಿದಾದ ಕೊಂಬುಗಳು, ನಿಚ್ಚಳವಾಗಿರುವ ಕಣ್ಣುಗಳು, ಚಿಕ್ಕ ಕಿವಿಗಳು, ಮುಖದಲ್ಲಿ ಎದ್ದು ಕಾಣುವ ನರಗಳು, ದಷ್ಟಪುಷ್ಟವಾದ ಮೈಮಾಟ ಬಸವಣ್ಣನ ನೈಜ ಲಕ್ಷಣಗಳಿವೆ. ಕೊರಳೊಳಗಿರುವ ಗೆಜ್ಜೆಯ ಸರ, ಗಂಟೆ, ತೊಗಲು, ಹಣೆಪಟ್ಟಿಯ ಗೆಜ್ಜೆಸರ, ಮಣಿಗೆಲಸ ಮುಂತಾದ ಕುಸುರಿ ಕೆಲಸ ಶಿಲ್ಪಿಯ ಕೈಚಳಕಕ್ಕೆ ನಿದರ್ಶನವಾಗಿದೆ.

ಕಲ್ಯಾಣ ಚಾಲುಕ್ಯರ ಮಾದರಿಯಲ್ಲಿರುವ ನಂದಿ ಶಿವನ ಅಭಿಮುಖವಾಗಿ ಭಕ್ತಿಭಾವ ತುಂಬಿದ ರೀತಿಯಲ್ಲಿ ಕುಳಿತ ಭಂಗಿಯಲ್ಲಿ ಕೆತ್ತನೆಯನ್ನು ಮಾಡಲಾಗಿದೆ. ಈ ನಂದಿಯು ಶಿಲ್ಪಗಳಲ್ಲಿಯೇ ಎದ್ದು ಕಾಣುವಂತಿದೆ. ಇದರಿಂದಲೇ ಈ ದೇವಾಲಯಕ್ಕೆ ದೊಡ್ಡಬಸಪ್ಪ ದೇವಾಲಯವೆಂದು ಕರೆದಿದ್ದಾರೆ.

ಮೇವುಂಡಿಯ ಉತ್ತರಕ್ಕೆ ಬಯಲು ಪ್ರದೇಶದಲ್ಲಿ ಪ್ರತ್ಯೇಕ ನಂದಿಯ ಸುಂದರ ಶಿಲ್ಪವಿದೆ. ಅದರ ಉತ್ತರ ೧೨೦ ಸೆಂ.ಮೀ. ಹಾಗೂ ಉದ್ದ ೯೦ ಸೆಂ.ಮೀ. ಆಗಿದೆ. ಇದರ ಕೊಂಬುಗಳು ಕಿರಿದಾಗಿದ್ದು, ಕಣ್ಣುಗಳು ಸುಂದರವಾಗಿವೆ. ಉತ್ತಮ ದೇಹ ಪ್ರಕೃತಿ ಹೊಂದಿರುವ ಈ ನಂದಿಶಿಲ್ಪ ಚಿಕ್ಕಕಿವಿ ಹೊಂದಿದ್ದು ಮೂಲದಲ್ಲಿ ಮುಗ್ಧತೆ ಎದ್ದು ಕಾಣುತ್ತದೆ. ಕೊರಳಲ್ಲಿ ಗಂಟೆಸರ, ಕಂಡು ಬಂದಿದ್ದು ನೋಡಲು ಅತ್ಯಂತ ಸುಂದರವಾಗಿದೆ.

**ಗಣಪತಿ**

ಡಂಬಳದಲ್ಲಿಯ ಕೋಟೆಯ ಒಳಗೊಂದು ಗವಿಯ ರೂಪದ ಕೋಣೆಯಿದೆ. ಆ ಕೋಣೆಯಲ್ಲೊಂದು ಗಣೇಶ ವಿಗ್ರಹವಿದೆ. ಸುಮಾರು ೨೮೦ ಸೆಂ.ಮೀ. ಎತ್ತರ. ೧೫೦ ಸೆಂ.ಮೀ.

ಅಗಲವಾಗಿರುವ ಮೂರ್ತಿಯನ್ನು ಈ ಕೋಟೆಯಲ್ಲಿ ಇತ್ತೀಚಿಗೆ ತಂದು ಇಟ್ಟಂತೆ ತೋರುತ್ತದೆ. ಇದೊಂದು ಚಾಲುಕ್ಯ ಶೈಲಿಯಲ್ಲಿ ಕೆತ್ತಲ್ಪಟ್ಟ ಸುಂದರಶಿಲ್ಪ. ಗಣಪತಿ, ಗಜಮುಖ, ಶೂರ್ಪಕರ್ಣ, ಆನೆಯ ತಲೆ, ಮೊರದಂತ ಕಿವಿಗಳು, ದ್ವಿಭುಜ ಹೊಂದಿದೆ. ಮುಕುಟ, ಕೊರಳಹಾರಗಳನ್ನು ಹೊಂದಿದ್ದು ಸುಖಾಸನದಲ್ಲಿದೆ. ಚತುರ್ಭುಜ ಹೊಂದಿದ್ದು ಮುಂದಿನ ಬಲ-ಎಡ ಕೈಗಳಲ್ಲಿ ದಂತ, ಹಿಂದಿನ ಎಡ-ಬಲಕೈಗಳಲ್ಲಿ ಪುರುಷ-ಜಂಬೂಫಲವನ್ನು ಹೊಂದಿದ್ದಾನೆ. ಗಣೇಶನಿಗೆ ಏಕದಂತವಿರುವದು. ಇಲ್ಲಿಯ ವೈಶಿಷ್ಟ್ಯ. ಇಲ್ಲಿ ಒಂದು ದಂತ ಮುರಿದಂತೆ ಕಾಣಿಸಲಾಗಿದೆ. ಗಣೇಶನ ಪೀಠಭಾಗದಲ್ಲಿ ಮೂಷಿಕವನ್ನು ಸುಂದರವಾಗಿ ಕೆತ್ತಲಾಗಿದೆ. ಈ ಗಣೇಶನ ನಿರ್ಮಾಣಕ್ಕೆ ಹಸಿರು ಮಿಶ್ರಿತ ಕಪ್ಪು ಶಿಲೆಯನ್ನು ಬಳಸಲಾಗಿದ್ದು, ಎಲ್ಲಿಂದಲೋ ತಂದು ಇಲ್ಲಿ ಸ್ಥಾಪಿಸಿದಂತೆ ತೋರುತ್ತದೆ.

**ವೀರಭದ್ರ**

ಸಿಂಗಟಾಲೂರಿನ ವೀರಭದ್ರ ದೇವಾಲಯದ ಗರ್ಭಗೃಹದಲ್ಲಿರುವ ಈ ಶಿಲ್ಪವು ಸುಮಾರು ೪ ಅಡಿ ಎತ್ತರವಾಗಿದೆ. ಈ ಶಿಲ್ಪ ಯಾವಾಗಲೂ ಅಲಂಕಾರದಿಂದ ಕೂಡಿರುವುದರಿಂದ ಶಿಲ್ಪದ ಶೈಲಿ ಹಾಗೂ ಕಾಲದ ಬಗೆಗೆ ಸ್ಪಷ್ಟವಾಗಿ ತಿಳಿದುಕೊಳ್ಳಲು ಕಷ್ಟಸಾಧ್ಯವಾಗಿದೆ.

ಗುಮ್ಮಗೋಳದ ಗೋಣಿಬಸಪ್ಪ ಮಠದ ತೆರೆದ ನೃತ್ಯ ಮಂಟಪದ ಎಡಭಾಗದ ಕೋಷ್ಟಕದಲ್ಲಿ ಈ ಶಿಲ್ಪವಿದೆ. ವೀರಭದ್ರನು ತ್ರಿಭಂಗಿಯಲ್ಲಿ ನಿಂತಿರುವನು. ಚತುರ್ಭುಜಧಾರಿಯಾಗಿದ್ದು, ಕೈಗಳಲ್ಲಿ ಬಿಲ್ಲು-ಬಾಣ, ಖಡ್ಗ ಹಾಗೂ ಡಾಲುಗಳನ್ನು ಹಿಡಿದಿರುವನು. ಶಿರದ ಹಿಂದೆ ಶೇಷ, ಮಗ್ಗುಲಿಗೆ ಭದ್ರಕಾಳಿ, ಅಂಜಲಿ ಮುದ್ರೆಯಲ್ಲಿ ಟಗರಿನ ತಲೆಯುಳ್ಳ ದಕ್ಷನ ಶಿಲ್ಪಗಳನ್ನು ಸಹ ವೀರಭದ್ರನ ಜೊತೆಗೆ ನಿರ್ಮಿಸಲಾಗಿದೆ.

ಪೇಠಾಲೂರಿನಲ್ಲಿಯು ವೀರಭದ್ರ ಶಿಲ್ಪವು ಮಹತ್ವದ್ದಾಗಿದೆ. ರುದ್ರನ ಉಗ್ರರೂಪಗಳ ಗುಂಪಿಗೆ ಸೇರಿದ ವೀರಭದ್ರ ಮೂರ್ತಿಯೊಂದು ಆಲೂರಿನಲ್ಲಿದೆ. ಕಿರೀಟ-ಮುಕುಟ, ಕೊರಳಹಾರ, ಯಜ್ಞೋಪವಿತ, ರುಂಡಮಾಲಾಧರಿಸಿ, ಸಮಭಂಗಿಯಲ್ಲಿದೆ. ನಾಲ್ಕು ಕೈಗಳನ್ನು ಹಿಂದಿನ ಬಲ-ಎಡಕೈಗಳಲ್ಲಿ ಬಾಣ-ಬಿಲ್ಲು ಮುಂದಿನ ಬಲ-ಎಡಕೈಗಳಲ್ಲಿ ಖಡ್ಗ-ಡಾಲು ಇರುತ್ತದೆ. ಫಲಕದ ಕೆಳಭಾಗದಲ್ಲಿ (ಟಗರು ಮುಖ) ದಕ್ಷಬ್ರಹ್ಮನ ಕಿರುಶಿಲ್ಪವಿದೆ. ಮೇಲ್ಭಾಗದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯ ಕೀರ್ತಿಮುಖವಿದೆ. ಮೂರ್ತಿಯು ಉಗ್ರರೂಪದಲ್ಲಿದೆ.

**ಷಣ್ಮುಖ**

ಡಂಬಳದಲ್ಲಿ ಸುಂದರ ಷಣ್ಮುಖ ಶಿಲ್ಪವಿದೆ. ಶಿಲ್ಪವು ಕಿರೀಟ, ಮುಕುಟ, ಮಕರಕುಂಡಲ, ಯಜ್ಞೋಪವಿತ, ಹಾರ, ಮಣಿಗಳ ಸರಗಳನ್ನು ಹಾಗೂ ಆರು ಮುಖಗಳು, ಹನ್ನೆರಡು ಕೈಗಳನ್ನು ಹೊಂದಿದೆ. ಮುಂದಿನ ಬಲ ಎಡ ಕೈಗಳು ಅಭಯ-ವರದ ಮುದ್ರೆಯಲ್ಲಿದ್ದು ಉಳಿದಂತೆ ಶಕ್ತಿ, ಖಡ್ಗ, ಗದಾ, ಧನುಷ್ಯ, ವಜ್ರ, ಪದ್ಮ, ಕಟಕ ಹಸ್ತದಲ್ಲಿ ಕಂಡುಬರುತ್ತವೆ.

## ನಾಗದೇವ

ತಾಮ್ರಗುಂಡಿಯ ಈಶ್ವರ ದೇವಾಲಯದ ಮುಂಭಾಗದಲ್ಲಿ ೬೦ ಸೆಂ.ಮೀ. ಎತ್ತರದ ಸುಂದರ ಐದು ಹೆಡೆಯ ನಾಗದೇವ ಶಿಲ್ಪವಿದೆ. ದೇಹಭಾಗ ಮಾನವ ಆಕಾರದಲ್ಲಿದ್ದು ಕೆಳಭಾಗ ನಾಗಬಾಲ ಆಕಾರದಲ್ಲಿದೆ. ಕೀರ್ತಿಮುಕುಟ, ಕರ್ಣಕುಂಡಲ, ಯಜ್ಞೋಪವಿತ ಮುಂತಾದ ಆಭರಣಗಳನ್ನು ಧರಿಸಿದ್ದು ಬಲ ಮತ್ತು ಎಡ ಕೈಗಳಲ್ಲಿ ಖಡ್ಗ-ಡಾಲುಗಳಿವೆ.

## ವೈಷ್ಣವ ಶಿಲ್ಪಗಳು

### ವೇಣುಗೋಪಾಲ (ಬಾಲಕೃಷ್ಣ)

ಶಿರೂರಿನ ಕೃಷ್ಣ ದೇವಾಲಯದ ಗರ್ಭಗೃಹದಲ್ಲಿ ಈ ಶಿಲ್ಪವಿದೆ. ಚತುರ್ಭುಜವುಳ್ಳ ಈ ಶಿಲ್ಪವು ಸುಂದರವಾಗಿದೆ. ಹಿಂಬದಿಯ ಕೈಗಳಲ್ಲಿ ಶಂಖ ಹಾಗೂ ಚಕ್ರವನ್ನು ಹಿಡಿದಿದ್ದರೆ, ಉಳಿದೆರಡು ಕೈಗಳಲ್ಲಿ ಕೊಳಲನ್ನು ಹಿಡಿದು ನಿಂತಿದೆ. ಈ ಶಿಲ್ಪದ ಎಡ ಮತ್ತು ಬಲ ಭಾಗದಲ್ಲಿ ಸ್ತ್ರೀಯರ ಎರಡು ಉಬ್ಬುಶಿಲ್ಪಗಳನ್ನು ಕೆತ್ತಿದ್ದು ಇವು ಬಹುಶಃ ಕೃಷ್ಣನ ಪತ್ನಿಯ (ರುಕ್ಮಿಣಿ ಹಾಗೂ ಸತ್ಯಭಾಮೆ) ಶಿಲ್ಪಗಳಾಗಿರಬಹುದು. ಅಲ್ಲದೆ ಇದೇ ಶಿಲ್ಪದ ಪೀಠ ಭಾಗದಲ್ಲಿ ಮತ್ತೆ ಮೂರು ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಅವು ಭಕ್ತರ ಶಿಲ್ಪಗಳಾಗಿವೆ.

### ವೆಂಕಟೇಶ್ವರ

ಮುಷ್ಠಿಕೊಪ್ಪದ ವೆಂಕಟೇಶ ದೇವಾಲಯದ ಗರ್ಭಗೃಹದಲ್ಲಿ ಈ ವೆಂಕಟೇಶನ ಶಿಲ್ಪವಿದೆ. ಚತುರ್ಭುಜಧಾರಿಯಾಗಿರುವ ವೆಂಕಟೇಶ್ವರನು ಸಮಭಂಗಿಯಲ್ಲಿರುವನು. ಶಿರದ ಮೇಲೆ ಕಿರೀಟವಿದ್ದು, ಹಿಂದಿನೆರಡು ಹಸ್ತಗಳಲ್ಲಿ ಶಂಖ, ಚಕ್ರವನ್ನು ಹಿಡಿದಿರುವನು. ಮುಂದಿನ ಬಲಗೈ ಅಭಯಹಸ್ತದಲ್ಲಿದೆ.

### ನರಸಿಂಹ

ಹೈತಾಪುರ ಗ್ರಾಮದ ಪ್ರಾಚೀನ ಕೆರೆಯ ಹತ್ತಿರವಿರುವ ನರಸಿಂಹನ ಶಿಲ್ಪ ಆಕರ್ಷಕವಾಗಿದ್ದು, ನರಸಿಂಹನು ಸಿಂಹದ ಮೇಲೆ ಕುಳಿತು ರಾಕ್ಷಸನ ಹೊಟ್ಟೆಯನ್ನು ಸೀಳುತ್ತಿರುವ ದೃಶ್ಯವಿದೆ. ಜೊತೆಗೆ ಇದರ ಕೆಳಗೆ ರಾಷ್ಟ್ರಕೂಟರ ಕಾಲದ ಶಾಸನವಿದ್ದು ಅದು ವಿಶಿಷ್ಟವೆನಿಸಿದೆ.

### ಶೇಷಶಯನ ವಿಷ್ಣು

ಮುಂಡರಗಿಯ ವೆಂಕಟೇಶ್ವರ ದೇವಾಲಯದಲ್ಲಿ ಈ ಶಿಲ್ಪವು ಕಂಡುಬರುತ್ತದೆ. ಈ ದೇವಾಲಯದ ನವರಂಗದ ಬಲಭಾಗದಲ್ಲಿ ಈ ಶಿಲ್ಪವಿದೆ. ಪ್ರತ್ಯೇಕವಾಗಿರುವ ಈ ಶೇಷಶಯನ ವಿಷ್ಣುಶಿಲ್ಪವು ಸುಂದರವಾಗಿದೆ. ಐದು ಹೆಡೆಯ ಶೇಷನ ಮೇಲೆ ವಿಷ್ಣು ಸುಖಾಸೀನವಾಗಿದ್ದಾನೆ. ಅವನು ಚತುರ್ಭುಜದಾರಿಯಾಗಿದ್ದು ಮುಂದಿನ ಬಲಕೈಯನ್ನು ಬಲಕಾಲಮೇಲೆ ಎಡಕೈಯನ್ನು ತಲೆಗೆ ಆಸರೆಯಾಗಿ ಮಾಡಿಕೊಂಡಿದ್ದಾನೆ. ಹಿಂದಿನ ಬಲ ಮತ್ತು ಎಡಕೈಗಳಲ್ಲಿ ಶಂಕ-ಚಕ್ರಗಳಿವೆ. ನಾಭಿ

ಯಿಂದ ಬ್ರಹ್ಮಹುಟ್ಟಿಕೊಂಡಂತೆಯೂ, ಶ್ರೀದೇವಿ (ಲಕ್ಷ್ಮೀ)ಯು ಕಾಲನ್ನೆತ್ತುತ್ತ ಕುಳಿತಂತೆಯೂ, ಭೂದೇವಿ (ನೀಲಾ) ಸೇವೆ ಮಾಡಲು ಕುಳಿತಂತೆಯೂ ಕೆತ್ತಲಾಗಿದೆ. ಪಕ್ಕದಲ್ಲಿ ಇಬ್ಬರು ಸ್ತ್ರೀ ಚಾಮರ ದಾರಿಗಳಿದ್ದಾರೆ. ಕಿರೀಟ, ಮುಕುಟ, ಕರ್ಣಕುಂಡಲ, ಯಜ್ಞೋಪವಿತ ಮುಂತಾದ ಸರ್ವಾಭರಣಗಳನ್ನು ಧರಿಸಿ ಸರ್ವಾಂಗ ಸುಂದರವಾಗಿ ಕಾಣುತ್ತಾನೆ. ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರಗಳನ್ನು ತೋರಿಸಲಾಗಿದೆ. ಕೆಲವು ಬಾರಿ ೨೪ ಅವತಾರಗಳೆಂದು ಹೇಳುವುದುಂಟು. ವೆಂಕಟೇಶ ವಿಷ್ಣುವಿನ ಸಾಮಾನ್ಯರೂಪವಾಗಿದ್ದರಿಂದಲೇ ಈ ದೇವಾಲಯವನ್ನು ವೆಂಕಟೇಶ ದೇವಾಲಯವೆಂದು ಕರೆದಿರಬಹುದು. ಈ ಶಿಲ್ಪದ ಪೀಠಭಾಗದಲ್ಲಿ ಗರುಡಶಿಲ್ಪವನ್ನು ಆಕರ್ಷಕವಾಗಿ ಕೆತ್ತಲಾಗಿದೆ.

**ಶಾಕ್ತ ಶಿಲ್ಪಗಳು**

**ಸಪ್ತಮಾತೃಕೆ**

ಡಂಬಳದಲ್ಲಿ ದೊರೆತ ಸಪ್ತಮಾತೃಕೆ ಶಿಲ್ಪ[೫] ಸುಂದರ ಕೆತ್ತನೆಯಿಂದ ಕೂಡಿದೆ. ಗಂಡು ದೇವತೆಗಳೊಂದಿಗೆ ಹೆಣ್ಣು ದೇವತೆಗಳನ್ನು ಶಕ್ತಿಯರೆಂದು ಒಪ್ಪಿಕೊಂಡು ಪೂಜಿಸಲಾಗುತ್ತಿದೆ. 'ಶಿವನಿಗೆ ಶಿವೆ, ವಿಷ್ಣುವಿಗೆ ಲಕ್ಷ್ಮಿ, ಬ್ರಹ್ಮನಿಗೆ ಸರಸ್ವತಿ, ಗಣಪತಿಗೆ ಸೃಷ್ಟಿ, ಅನಂತನಿಗೆ ತುಷ್ಟಿ, ಕಾಲನಿಗೆ ರಾತ್ರಿ, ಸೂರ್ಯನಿಗೆ ಸಂಜ್ಞೆ, ಇಂದ್ರನಿಗೆ ಶುಚಿ, ಅಗ್ನಿಗೆ ಸ್ವಾಹಾ, ದಕ್ಷನಿಗೆ ದಕ್ಷಿಣೆ, ಸ್ಕಂದನಿಗೆ ದೇವಸೇನೆ ಇತ್ಯಾದಿ'[೬]ಗಳನ್ನು ಹೆಸರಿಸಬಹುದು.

ಪೇಠಾಲೂರಿನ ನಾಗನಾಥೇಶ್ವರ ದೇವಾಲಯದ ಅಂತರಾಳದ ಮಹಾದ್ವಾರದ ದಕ್ಷಿಣದ ಕಡೆಗೆ ಭಿತ್ತಿಯ ಭಾಗದಲ್ಲಿ ಸಪ್ತಮಾತೃಕೆಯರನ್ನು ಕೆತ್ತಲಾಗಿದೆ. ಅವೇ ಬ್ರಾಹ್ಮೀ, ಮಹೇಶ್ವರಿ, ಕೌಮಾರಿ, ವೈಷ್ಣವಿ, ಒರಾಹಿ, ಇಂದ್ರಾಣಿ, ಮತ್ತು ಚಾಮುಂಡಿಯ ನಂತರ ಗಣಪತಿ ಇವುಗಳನ್ನು ಒಂದೇ ಶಿಲೆಯಲ್ಲಿ ಕೆತ್ತಲಾಗಿದ್ದು ಪೀಠದ ಕೆಳಭಾಗದಲ್ಲಿ ಹಂಸ, ವೃಷಭ, ನವಿಲು, ಗರುಡ, ವರಾಹ, ಆನೆ ಮತ್ತು ನರಿಗಳು ಇರುತ್ತವೆ. ನರಿ ಹಾಗೂ ಹಂಸದ ಮುಂಚೆ ವೃಷಭ, ನರಿಯ ನಂತರ ಮೂಶಿಕ ವಾಹನಗಳನ್ನು ಆಯಾ ದೇವತೆಗಳ ಕೆಳಗೆ ಕೆತ್ತಲಾಗಿದೆ. ಇದೇ ಮಾದರಿಯ ಸಪ್ತಮಾತೃಕೆ ಶಿಲ್ಪಗಳನ್ನು ಬರದೂರು, ಡೋಣಿ, ಲಕ್ಕುಂಡಿ, ನಾಗರಹಳ್ಳಿ, ಶಿರೂರುಗಳಲ್ಲಿ ಕಾಣಬಹುದು.

**ಮಹಿಷಮರ್ದಿನಿ**

ಪೇಠಾಲೂರಿನ ನಾಗನಾಥೇಶ್ವರ ದೇವಾಲಯದಲ್ಲಿರುವ ಮಹಿಷಮರ್ದಿನಿ ಅಥವಾ ದುರ್ಗಾ ಪರಮೇಶ್ವರರಿಗೆ ನಾಲ್ಕು ಕೈಗಳಿವೆ. ತಲೆಯ ಮೇಲೆ ಜಟ ಮುಕುಟವಿದೆ. ಕೊರಳಲ್ಲಿ ಹಾರ ಮತ್ತು ಕೈಗಳಲ್ಲಿ ಬಳೆಗಳು ಇವೆ. ಸೊಂಟದಲ್ಲಿ ವಸ್ತ್ರವಿನ್ಯಾಸವಿದೆ. ಪಾದಗಳಲ್ಲಿ ಕಡಗಗಳಿವೆ. ಮಹಿಷಮರ್ಧಿನಿಯು ಎಡಗಾಲಿನಿಂದ ಮಹಿಷಾಸುರನನ್ನು ಅದಮುವ ದೃಶ್ಯವಿದೆ. ದೇವಿಗೆ ನಾಲ್ಕು ಭುಜಗಳು ಇವೆ. ಕೆಳಬಲಗೈಯಲ್ಲಿ ಇರುವ ತ್ರಿಶೂಲದಿಂದ ದೇವಿಯು ಕೋಣವನ್ನು ಕೊಲ್ಲುವ

ದೃಶ್ಯವಿದೆ. ಮೇಲಿನ ಬಲಗೈಯಲ್ಲಿ ಸ್ಥಿತಿಚಿತ್ರ ಮತ್ತು ಎಡಗೈಯಲ್ಲಿ ಶಂಖವಿದೆ. ದೇವಿಯು ಕೈಯಿಂದ ಕೋಣದ ರೂಪದ ಮಹಿಷಾಸುರನ ಶರೀರವನ್ನು ಅದುಮುವಂತೆ ಶಿಲೆಯಲ್ಲಿ ಕೆತ್ತಲಾಗಿದೆ.

ಡಂಬಳದ ದೊಡ್ಡಬಸಪ್ಪನ ದೇವಾಲಯದ ನವರಂಗದಲ್ಲಿ ೧೧-೧೨ನೆಯ ಶತಮಾನದ ಸುಂದರವಾದ ಮಹಿಷಮರ್ದಿನಿ ಬಿಡಿ ಶಿಲ್ಪವನ್ನು ಜೋಡಿಸಿ ಇಡಲಾಗಿದೆ. ೬೫ ಸೆಂ.ಮೀ. ಎತ್ತರ, ४೦.ಸೆಂ.ಮೀ. ಅಗಲವಾಗಿರುವ ಇದು ಎಂಟು ಕೈಗಳನ್ನು ಹೊಂದಿದೆ. ಹಿಂದಿನಿಂದ ಕ್ರಮವಾಗಿ ಬಲ-ಎಡಕೈಗಳನ್ನು ಚಕ್ರ, ಶಂಖ, ಬಾಣ, ಬಿಲ್ಲು, ಖಡ್ಗ, ಡಾಲು, ಮುಂದಿನ ಬಲಕೈಯಲ್ಲಿ ತ್ರಿಶೂಲ ಹಿಡಿದು ಎಡಕೈಯಿಂದ ಕೋಣದ ಶಿರ ಹಿಡಿದು ಇರಿಯುತ್ತಿದ್ದಾಳೆ. ಎಡಕಾಲಿನಿಂದ ಮಹಿಷನನ್ನು ಮೆಟ್ಟಿನಿಂತದ್ದು, ಅವಳ ವಾಹನ ಸಿಂಹವು ಮಹಿಷನ ಮೇಲೆ ಎರಗಿದಂತೆ ಕೆತ್ತಲಾಗಿದೆ. ಶಿಲ್ಪವು ಕಿರೀಟ, ಮುಕುಟ, ಕರ್ಣಾಭರಣ, ಕಂಠಾಭರಣ, ರತ್ನಾಪಟ್ಟಿಕೆ, ಬಳೆಗಳನ್ನು ಧರಿಸಿದ್ದು ಭಯಂಕರ ರೂಪದಲ್ಲಿದೆ. ಅದರಂತೆ ಊರಲ್ಲಿಯ ಹನುಮಾನ್ ದೇವರ ಗುಡಿಯ ಹತ್ತಿರವೂ ಒಂದು ಸು. ೧೩-೧४ನೆಯ ಶತಮಾನದ ಮಹಿಷಾಸುರಮರ್ದಿನಿ ವಿಗ್ರಹವಿದೆ.

## ದುರ್ಗೆ

ಡೋಣಿ ಗ್ರಾಮದ ಹೊರಹೊಲಯದಲ್ಲಿ ನಿರ್ಮಾಣವಾಗಿರುವ ಡೋಣಿಕವ್ವೆ ದೇವಾಲಯದಲ್ಲಿ ದುರ್ಗೆಯ ಮೂರ್ತಿಶಿಲ್ಪವಿದೆ. ದೇವಾಲಯದ ಗರ್ಭಗೃಹದಲ್ಲಿ ಸುಖಾಸನದಲ್ಲಿ ಆಸೀನಳಾಗಿರುವ ದುರ್ಗಾದೇವಿ ಶಿಲ್ಪವಿದ್ದು ೭೦ ಸೆಂಮೀ. ಎತ್ತರ, ೫೦ ಸೆಂ.ಮೀ. ಅಗಲವಾಗಿದೆ. ಶಿಲ್ಪವು ಚತುರ್ಭುಜವನ್ನು ಹೊಂದಿದ್ದು ಮುಂದಿನ ಎಡಕೈಯಲ್ಲಿ ಕಪಾಲವನ್ನು ಹಿಡಿದಿದ್ದು, ಬಲಕೈ ಅಭಯ ಹಸ್ತದಲ್ಲಿದೆ. ಹಿಂದಿನ ಎಡ-ಬಲಕೈಗಳಲ್ಲಿ ಶಂಖ-ಚಕ್ರಗಳಿವೆ. ಜಟಾಮುಕುಟಧಾರಿಯಾಗಿದ್ದು, ಕಂಠಹಾರ, ರತ್ನಮಾಲಾ, ತೋಳ್ಬಂಧಿ, ಕೈಬಳೆ, ಕಾಲ್ಬಳೆಗಳನ್ನು ಧರಿಸಿದ್ದು ಪ್ರಭಾವಳಿಯಲ್ಲಿ ಮಣಿಕೆಲಸದ ಕೆತ್ತನೆಯಿದೆ.

## ಗಜಲಕ್ಷ್ಮಿ

ತಾಮ್ರಗುಂಡಿಯ ಈಶ್ವರ ದೇವಾಲಯದ ಸಮೀಪದಲ್ಲಿ ಈ ಗಜಲಕ್ಷ್ಮಿ ಶಿಲ್ಪವಿದೆ. ಕಮಲದ ಮೇಲೆ ಪದ್ಮಾಸನದಲ್ಲಿ ಕುಳಿತಿದ್ದು, ಚತುರ್ಭುಜ ಲಕ್ಷ್ಮಿಯಾಗಿದ್ದಾಳೆ. ಸುಮಾರು ४೫ ಸೆಂ.ಮೀ.ಎತ್ತರ, ४೦ ಸೆಂ.ಮೀ. ಅಗಲದ ಈ ಶಿಲ್ಪದಲ್ಲಿ ಲಕ್ಷ್ಮೀಯ ಹಿಂದಿನ ಎರಡು ಕೈಗಳಲ್ಲಿ ಸೌಭಾಗ್ಯ ಚಿಹ್ನೆಯಾದ ಕಮಲದ ಹೂವನ್ನು ಮುಂದಿನ ಎರಡು ಕೈಗಳು ವರಹ-ಅಭಯ ಮುದ್ರೆಯಲ್ಲಿವೆ. ಆಕೆಯ ತಲೆಯ ಮೇಲೆ ಕುಂಭಗಳಿಂದ ನಾಲ್ಕು ಆನೆಗಳು ಅಭಿಷೇಕ ಮಾಡುತ್ತಿರುವದು ತಿಳಿಯುತ್ತದೆ. ಈ ರೀತಿಯ ಶಿಲ್ಪಗಳಿಗೆ ಪ್ರತ್ಯೇಕವಾದ ದೇವಾಲಯಗಳಿಲ್ಲವಾದರೂ ಪ್ರತಿಯೊಂದು ದೇವಾಲಯದ ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ರೂಪದಲ್ಲಿ ಅಳವಡಿಸಲಾಗಿದೆ. ಮಹಿಷಮರ್ಧಿನಿಯು ಎಡಗಾಲಿನಿಂದ ಮಹಿಷಾಸುರನನ್ನು ಆದಮುವ ದೃಶ್ಯವಿದೆ. ದೇವಿಗೆ ನಾಲ್ಕು ಭುಜಗಳು ಇವೆ.

ಕೆಳಬಲಗೈಯಲ್ಲಿ ಇರುವ ತ್ರಿಶೂಲದಿಂದ ದೇವಿಯು ಕೋಣನನ್ನು ಕೊಲ್ಲುವ ದೃಶ್ಯವಿದೆ. ಮೇಲಿನ ಬಲಗೈಯಲ್ಲಿ ಸ್ಥಿತಿ ಚಕ್ರ ಮತ್ತು ಎಡಗೈಯಲ್ಲಿ ಸಂಖವಿದೆ. ದೇವಿಯು ಕೆಳಗಿನ ಕೈಯಿಂದ ಕೋಣದ ರೂಪದ ಮಹಿಷಾಸುರನ ಶರೀರವನ್ನು ಅದಮುವಂತೆ ಶಿಲೆಯಲ್ಲಿ ಕೆತ್ತಲಾಗಿದೆ.

**ಬೌದ್ಧಶಿಲ್ಪಗಳು**

**ಡಂಬಳದ ಬೌದ್ಧಯಕ್ಷ**

ಡಂಬಳದ ಕೋಟೆಯಲ್ಲಿಯ ಜೈನ ಬಸದಿಯ ಹತ್ತಿರ "೩೧ ಎತ್ತರ ೨೧" ಆಗಲವಿರುವ ಸ್ತಂಭಶಾಖೆಯಿದ್ದು, ೧೮ ಸೆಂ.ಮೀ. ಎತ್ತರದ ಕುಬ್ಜ ಬೌದ್ಧಯಕ್ಷನ ಉಬ್ಬುಶಿಲ್ಪವು ಸುಂದರ ಕೆತ್ತನೆಯಿಂದ ಕೂಡಿದೆ. ಕೀರ್ತಿಮುಕುಟ, ಕರ್ಣಕುಂಡಲ, ಮಣಿಸರ, ಯಜ್ಞೋಪವಿತ, ದೋತಿಗಳನ್ನು ಧರಿಸಿದೆ. ಎಡಕೈಯಲ್ಲಿ ಕಪಾಲವನ್ನು, ಬಲಗೈಯಲ್ಲಿ ಛತ್ರಿಯಾಕಾರದ ಹೂವನ್ನು ಹಿಡಿದಿದ್ದು ಸುಖಾಸನದಲ್ಲಿದೆ. ಈ ಶಿಲ್ಪದ ಮೇಲ್ಭಾಗದಲ್ಲೊಂದು ಶಿಲ್ಪವಿದ್ದು ಕಾಲಿನಭಾಗ ಮಾತ್ರ ಉಳಿದಿದ್ದು, ಉಳಿದಂತೆ ಭಗ್ನವಾಗಿದೆ. ಅದು ಸುಮಾರು ಕ್ರಿ.ಶ.೮-೯ನೇ ಶತಮಾನದ ಶಿಲ್ಪವಾಗಿದೆ.

**ಜೈನ ಶಿಲ್ಪಗಳು**

**ಡಂಬಳದ ಪಾರ್ಶ್ವನಾಥ**

ಡಂಬಳದಲ್ಲಿ ೧೯೯೯ ಜೂನ್ ೧೦ರಂದು ಖಡ್ಗಾಸನದಲ್ಲಿರುವ ಪಾರ್ಶ್ವನಾಥ ತೀರ್ಥಂಕರ ಅಪೂರ್ವ ಮೂರ್ತಿದೊರೆತಿದೆ. ೪೦ "ಎತ್ತರ ೨೪" ಅಗಲ ಗಾತ್ರದ ಇದನ್ನು ಈಗ ಗದಗಿನ ಪ್ರಾಚ್ಯವಸ್ತು ಸಂಗ್ರಹಾಲಯದ ಹೊರಗಡೆ ನಿಲ್ಲಿಸಲಾಗಿದೆ. ಮೂರ್ತಿಯನ್ನು ಹಸಿರು ಛಾಯೆಯ ಕಪ್ಪುಶಿಲೆಯ ಮೇಲೆ ಕೆತ್ತಲಾಗಿದೆ. ಈ ಶಿಲ್ಪದ ಪೀಠದ ಮೇಲೆ ೧೨ನೆಯ ಶತಮಾನದ ಅಕ್ಷರಗಳುಳ್ಳ ಮೂರು ಸಾಲಿನ ಶಾಸನವಿದೆ. ಕಾಯೋತ್ಸರ್ಗ ಭಂಗಿಯಲ್ಲಿ ನಿಂತ ಸುಂದರ ಪಾರ್ಶ್ವ ನಾಥನ ತೀರ್ಥಂಕರನಿದ್ದು, ಮೇಲೆ ಏಳು ಹೆಡೆಗಳನ್ನು ಎತ್ತಿ ನಿಂತ ಸರ್ಪವಿದೆ. ಸರ್ಪದ ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಪಾರ್ಶ್ವನಾಥನ ಭುಜದ ಎಡಬಲಗಳಲ್ಲಿ ಚಾಮರಗಳಿವೆ. ಚಾಮರಗಳ ಎಡಬಲಗಳಲ್ಲಿ ಪರ್ಯಾಂಕಾಸನದಲ್ಲಿರುವ ಪುಟ್ಟ ತೀರ್ಥಂಕರರ ವಿಗ್ರಹಗಳಿದ್ದು ಮೇಲೆ ಮುಕ್ಕೊಡೆಗಳಿವೆ. ಹಾಗೆಯೇ ತೊಡೆಯ ಎಡಬಲದಲ್ಲಿ ಪರ್ಯಾಂಕಾಸನ ತೀರ್ಥಂಕರ ವಿಗ್ರಹಗಳಿದ್ದು, ಅವುಗಳ ಮೇಲೆ ಮುಕ್ಕೊಡೆಗಳಿವೆ. ಕಾಲಿನ ಬಲಭಾಗದಲ್ಲಿ ನಿಂತಿರುವ ಪದ್ಮಾವತಿ ಯಕ್ಷಿಯಿದ್ದು ಕಾಲಿನ ಎಡಭಾಗದಲ್ಲಿ ನಿಂತಿರುವ ಧರಣೇಂದ್ರ ಯಕ್ಷನಿದ್ದಾನೆ. ತೀರ್ಥಂಕರನ ಗುಂಗುರು ಕೂದಲೂ, ಉದ್ದವಾದ ಕಿವಿ, ಕಂಠಭಾಗದಲ್ಲಿರುವ ರೇಖೆಗಳು, ತುಟಿ, ಗದ್ದ, ನೀಳವಾದ ನಾಸಿಕ, ಶಾಂತಭಾವ ಸೂಚಿಸುವ ಕಣ್ಣುಗಳು ಮತ್ತು ಹುಬ್ಬುಗಳು ತುಂಬ ಸುಂದರವಾಗಿ ಚಿತ್ರಿತವಾಗಿವೆ. ನಾಭಿಯ ಕೆಳಗೆ ಇರುವ ರೇಖೆಗಳು, ಮೊಣಕಾಲು, ಪಾದಗಳು, ಪಾದಗಳ ಬೆರಳುಗಳು ಸುಂದರವಾಗಿವೆ. ಹಾಗೆಯೇ ನೀಳವಾದ ಕೈ, ಸುಂದರವಾದ ಬೆರಳುಗಳು ಉಗುರುಗಳ ಸಹಿತ ಚಿತ್ರಣಗೊಂಡಿದ್ದು, ಅಗಲವಾದ

ಭುತ, ಹರವಾದ ಎದೆ ಇವುಗಳನ್ನು ಕೂಡ ಶಿಲ್ಪಿ ಸುಂದರವಾಗಿ ಕೆತ್ತಿದ್ದಾನೆ. ಧರಣೆಂದ್ರ ಯಕ್ಷನ ಕೈಗಳಲ್ಲಿ ಪದ್ಮ, ಅಂಕುಶ, ಪಾಶ ಮತ್ತು ಮಾಧುಫಲಗಳು ಇದ್ದು ವರದೇವತೆ ಪದ್ಮಾವತಿ ಸರ್ವಾಲಂಕಾರ ಭೂಷಿತೆ ಆಗಿದ್ದಾಳೆ. ತೆರೆಯಮೇಲೆ ಕಿರೀಟ, ತುರುಬಿನ ಸುತ್ತಲು ಹೂಮಾಲೆ, ಕಂಠಾಭರಣ, ಕಿವಿಯೋಲೆ, ಕೊರಳ ಹಾರಗಳು, ಕಾಲಲ್ಲಿ ಅಂದುಗೆ, ಕಾಲಗಡಗಗಳು, ಕೈಯಲ್ಲಿ ಕಂಕಣಗಳನ್ನು ಧರಿಸಿದ್ದಾಳೆ. ಶಿಲ್ಪ ಪ್ರಮಾಣಬದ್ಧವಾದ ಈ ಮೂರ್ತಿಯ ಕಣ್ಣು, ಮೂಗು, ಹುಬ್ಬಗಳನ್ನು ಕೂಡ ಸುಂದರವಾಗಿ ಕೆತ್ತಿದ್ದಾನೆ. ಧರಣೇಂದ್ರ ಯಕ್ಷಿಣಿಗೆ ಜನಿವಾರವೂ ಇದೆ.[೨೦]

**ಲೌಕಿಕ ಶಿಲ್ಪಗಳು**

**ಡೋಣಿಯ ಹುಲಿಬೇಟೆ ವೀರಗಲ್ಲು**

ಡೋಣಿಯ ಸಿದ್ದಲಿಂಗೇಶ್ವರ ದೇವಾಲಯದ ಮುಂಭಾಗದಲ್ಲಿ ಕಂಡುಬರುವ ಈ ವೀರಗಲ್ಲು ಮಹತ್ವಾದ್ದಾಗಿದೆ. ಹುಲಿಬೇಟೆಯನ್ನಾಡಿ ವೀರಮರಣ ಹೊಂದಿರುವ ಯೋಧನೊಬ್ಬನ ಶಿಲಾಫಲಕದ ಕೆತ್ತನೆಯು ಮನಸ್ಸಿಗೆ ಮುದ ನೀಡುತ್ತಿದೆ. ಕೆಳಭಾಗದಲ್ಲಿ ಬಿಲ್ಲು-ಬಾಣ ಹೂಡಿ ಎದುರಿಗೆ ನಿಂತಿರುವ ಹುಲಿಯನ್ನು ಕೊಲ್ಲುವ ಸಾಹಸದಲ್ಲಿ ತೊಡಗಿದ ಹಾಗೂ ಮೇಲ್ಭಾಗದಲ್ಲಿ ಈ ಯೋಧನನ್ನು ಇಬ್ಬರು ಸ್ತ್ರೀಯರು ಕರೆದೊಯ್ಯುತ್ತಿರುವ ಚಿತ್ರವನ್ನು ಕೆತ್ತಲಾಗಿದೆ. ಬಹುಶಃ ಯೋಧನು ಬೇಟೆಯ ಸಮಯದಲ್ಲಿ ಮರಣ ಹೊಂದಿರುವ ಸಾಧ್ಯತೆಗಳಿವೆ.

**ಮೇವುಂಡಿಯ ಕೀಳ್ಗುಂಟೆ ಶಾಸನಶಿಲ್ಪ**

ಮೇವುಂಡಿ ಗ್ರಾಮದ ಮಧ್ಯ ಭಾಗದಲ್ಲಿ ಕಂಡುಬರುವ ಈ ಶಾಸನ ಶಿಲ್ಪ ರಾಷ್ಟ್ರಕೂಟರ ಕಾಲದ್ದಾಗಿದೆ. ರಾಷ್ಟ್ರಕೂಟರ ಉಲ್ಲೇಖವನ್ನು (ಕ್ರಿ.ಶ.೮೬೪) ಮೊಟ್ಟಮೊದಲಿಗೆ ತಿಳಿಸುವ ಶಾಸನಶಿಲ್ಪ ಇದಾಗಿದೆ. ಈ ಶಾಸನದಲ್ಲಿ ರಟ್ಟಯಣ್ಣ ಎಂಬುವವನು ತನ್ನ ಅರಸನ ಆರ್ಯೋಗ್ಯ ಸರಿಯಿಲ್ಲ ಎಂದು ತಿಳಿದು ಅರಸನನ್ನು ನೋಡಲು ತಕ್ಷಣ ಹೊರಡುತ್ತಾನೆ. ಆದರೆ ಅವನು ಬರುವಷ್ಟರಲ್ಲಿ ಅರಸನ ದೇಹವು ಚಿತೆಯಲ್ಲಿ ಉರಿಯುತ್ತಿರುತ್ತದೆ. ತಕ್ಷಣವೇ ಅವನು ಖಡ್ಗದಿಂದ ತನ್ನ ಕತ್ತನ್ನು ತಾನೇ ಕತ್ತರಿಸಿಕೊಳ್ಳುತ್ತಾನೆ. ಈ ಶಾಸನಶಿಲ್ಪದ ಕೆಳಹಂತದ ಮೂಲೆಯಲ್ಲಿ ಒಬ್ಬ ವ್ಯಕ್ತಿಯು ಒಂದು ಆಳವಾದ ಗುಂಡಿಯೊಳಗೆ ಕುಳಿತಿದ್ದಾನೆ. ಇವನೇ ಕಟ್ಟೆಯಣ್ಣನಿರಬಹುದು. ಈ ಗುಂಡಿಯು ಕಲ್ಲಿನ ಸಮಾಧಿಯಾಗಿದ್ದು, ಇವನೂ ಕೂಡ ಸಾಯಲು ಸಮಾಧಿಯಲ್ಲಿ ಕುಳತಿದ್ದಾನೆ. ಈ ಸಮಾಧಿಯ ಮರಣವನ್ನೇ ನಿಜವಾದ ಅರ್ಥದಲ್ಲಿ 'ಕಿಮ್ಗಿಂಟೆ' ಎಂದು ಕರೆಯುವದು. ಕಿಮ್ಗಿಂಟೆ ಪದವು ಮೂಲತಃ ಇದು ಕೇವಲ ಸಮಾಧಿಯ (ಕುಂಟೆ=ತಗ್ಗು) ಕೆಳಗೆ ಹೂಳಲ್ಪಡುವುದನ್ನು ಮಾತ್ರ ಸೂಚಿಸುತ್ತಿದ್ದು ಆಮೇಲೆ ಅಗ್ನಿ ಪ್ರವೇಶ ಮಾಡಿದವನಿಗೂ ಕ್ರಿಯಾಪದವಾಗಿಗೊಂಡಿತೇನೋ"[೨೧]

ಹೀಗೆ ಮುಂಡರಗಿ ಪರಿಸರದಲ್ಲಿ ವಿಭಿನ್ನ ರೀತಿಯಾದ ಶಿಲ್ಪಾವಶೇಷಗಳು ಇತಿಹಾಸದ ರಚನಾ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ.

**ಅಡಿಟಿಪ್ಪಣಿ**

೧. ಶ್ರೀನಿವಾಸಮೂರ್ತಿ ಹೆಚ್‌ವಿ.: ಇತಿಹಾಸ ಸಂಶೋಧನಾ ಸಮೀಕ್ಷೆ ಪುಟ-೪೩.

೨. ಪಾಡೀಗಾರ್ ಎಸ್.ವಿ.: ಪುರಾತತ್ವಶಾಸ್ತ್ರ ಪರಿಚಯ ಪುಟ. ೧-೨

೩. ಆರ್.ಗೋಪಾಲ್: ಲೇಖನ-ಡಾ.ಪಿ.ವಿ.ಕೃಷ್ಣಮೂರ್ತಿ: ಗದಗ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ: ಗದಗ ಜಿಲ್ಲೆಯ ಪ್ರಾಚೀಮ ಸ್ಥಳೀಯ ಆಡಳಿತ ಘಟಕ ಮತ್ತು ಆಡಳಿತ ಪುಟ.೨೦೫.

೪. ಪಾಲಾಕ್ಷ: ಕರ್ನಾಟಕದ ಇತಿಹಾಸ ಪರಿಚಯ. ಪುಟ.೨೦.

೫. ಶಿವತಾರಕ್ ಕೆ.ಬಿ.: ಕರ್ನಾಟಕದ ಪುರಾತತ್ವ ನೆಲೆಗಳು ಪುಟ. ೧೪೪-೧೬೧

೬. ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದ ಹಾಗೆ.

೭. ಶಿವತಾರಕ್ ಕೆ.ಬಿ.: ಪೂರ್ವೋಕ್ತ ಪುಟ.೧೬೧

೮. ಶ್ರೀಮಹಾಲಿಂಗ ಯಾಳಗಿ: ಮುಂಡರಗಿ ನಾಡ ದರ್ಶನ. ಪುಟ.೭

೯. ಧಾರವಾಡ ಜಿಲ್ಲಾ ಗೆಜಿಟಿಯರ್ ಪುಟ.೯೨೩.

೧೦. ಅದೇ.....ಪುಟ-೯೪೩

೧೧. ಧಾಜಿಗೆ....ಪುಟ.೯೪೩.

೧೨. ಚಂದ್ರಶೇಖರ ವಸ್ತ್ರದ, ಅರ್ಜುನ್ ಗೊಳಸಂಗಿ (ಸಂ.): ಕೃತುಪುರ (ಲೇ.) ಮಹಾಲಿಂಗ ಯಾಳಗಿ ಮುಂಡರಗಿ, ಪುಟ.೪೫. ೨೦೦೮.

೧೩. ಅದೇ.....ಪುಟ-೪೬

೧೪. ಇತಿಹಾಸ ದರ್ಶನ ಸಂ.೭. ೧೯೯೨. ಎಚ್.ಆರ್.ರಘುನಾಥಭಟ್ಟರ ಲೇಖನದಿಂದ ಗ್ರಹಿಸಿದ ಅಂಶಗಳು.

೧೫. ಧಾಜಿಗೆ.... ಪುಟ.೯೯೫.

೧೬. ಬಾಲಸುಬ್ರಮಣ್ಯ, ವಾಸುದೇವನ್ ಸಿ.ಎಸ್., ರಮೇಶನಾಯಕ: ಕರ್ನಾಟಕ ದೇವಾಲಯ ಕೋಶ - ಗದಗ ಜಿಲ್ಲೆ....ಪುಟ.೧೬೭. ೨೦೦೭.

೧೭. ಚಂದ್ರಶೇಖರ ವಸ್ತ್ರದ, ಅರ್ಜುನ್ ಗೊಳಸಂಗಿ (ಸಂ.): ಪೂರ್ವೋಕ್ತ ಪುಟ.೪೫.

೧೮. ಧಾಜಿಗೆ.....ಪುಟ.೯೪೫.

೧೯. ಚಂದ್ರಶೇಖರ ವಸ್ತ್ರದ, ಅರ್ಜುನ್ ಗೊಳಸಂಗಿ (ಸಂ.): ಪೂರ್ವೋಕ್ತ ಪುಟ.೪೮.

೨೦. ಅದೇ....ಪುಟ.೪೮.

೨೧. ಧಾಜಿಶಾಸೂ...೧೦....ಪುಟ.೪೦

೨೨. ಬಾಲಸುಬ್ರಮಣ್ಯ, ವಾಸುದೇವನ್ ಸಿ.ಎಸ್., ರಮೇಶನಾಯಕ: ಪೂರ್ವೋಕ್ತ. ಪುಟ.೧೨೫.

೨೩. ರಾಘುವೇಂದ್ರಕೃಷ್ಣ ಅಪರಂಜಿ: ಪೇಠಾ ಆಲೂರ ಗ್ರಾಮದ ಇತಿಹಾಸ, ಪುಟ.೫, ೨೦೦೪.

೨೫. ಜನಪದ ಮಾಸ ಪತ್ರಿಕೆ: ಪರ್ವತಿ ಪಿ.ಎಸ್. ಚಾಲುಕ್ಯ ಸಿರಿಯ ಡಂಬಳ (ಲೇಖನ) ಪುಟ.೩೦

೨೬. ಬಾಲಸುಬ್ರಮಣ್ಯ, ವಾಸುದೇವನ್ ಸಿ.ಎಸ್., ರಮೇಶನಾಯಕ: ಪೂರ್ವೋಕ್ತ, ಪುಟ.೧೩೯.

೨೭. ಅದೇ......ಪುಟ.೧೪೪.

೨೮. ಅದೇ......ಪುಟ.೧೪೬.

೨೯. ಅದೇ.....ಪುಟ.೩೩೮.

೩೦. SII.Xi-i, 22, 897. ಮೇವುಂಡಿ. ಮುಂಡರಗಿ (ತಾ) ಗದಗ (ಜಿಲ್ಲೆ)

೩೧. ಧಾ.ಜಿ.ಶಾ.ಸೂ. ಪುಟ.೪೧.

೩೨. ಅದೇ....ಪುಟ.೪೦

೩೩. ಧಾಜಿಗೆ......ಪುಟ.೯೪೩.

೩೪. ಮಾಥುರ, ಎನ್.ಎಲ್.: ಸ್ಕಲ್ಪಚರ್ ಇನ್ ಇಂಡಿಯಾ ಇಟ್ಸ್ ಹಿಸ್ಟರಿ ಅಂಡ್ ಆರ್ಟ್, ಪುಟ.೧.

೩೫. ಗದಗ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಿಸಿ ಇಡಲಾಗಿದೆ.

೩೬. ರಾಮಚಂದ್ರರಾವ್ ಎಸ್.ಕೆ. ಮೂರ್ತಿಶಿಲ್ಪ ನೆಲೆ-ಹಿನ್ನಲೆ,, ಬೆಂಗಳೂರು, ೧೯೭೩. ಪುಟ. ೧೭೨.

೩೭. ಹನುಮಾಕ್ಷಿ, ಗೋಗಿ, ಪಿ.ಕೆ.ರಾಠೋಡ್: ಡಂಬಳ ಒಂದು ಸಾಂಸ್ಕೃತಿಕ ಅಧ್ಯಯನ ಪುಟ.೬೪.

# ಅಧ್ಯಾಯ ೪. ಐತಿಹ್ಯಗಳು

೪.೧. ಶಾಸನ ಉಲ್ಲೇಖಿತ ಐತಿಹ್ಯಗಳು
೪.೨. ಮೌಖಿಕ ಕಥನಗಳು
೪.೩. ಸ್ಥಳಾಧಾರಿತ ಐತಿಹ್ಯಗಳು

ಅಧ್ಯಾಯ ೪

# ಐತಿಹ್ಯಗಳು

ಒಂದು ಪ್ರದೇಶದ ಸಮಗ್ರ ಅಧ್ಯಯನ ಕೈಗೊಳ್ಳುವುದರ ಮೂಲಕ ಆ ಪ್ರದೇಶದ ಚರಿತ್ರೆಯನ್ನು ಕಟ್ಟಲು ಸಾಧ್ಯವಿದೆ. ಆದರೆ ಇಲ್ಲಿಯವರೆಗೆ ಇತಿಹಾಸ ರಚನೆಕಾರರು ಲಿಖಿತ ಪರಂಪರೆಯನ್ನೇ ಅವಲಂಬಿಸಿ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಇದರಿಂದಾಗಿ ಬಹುಸಂಖ್ಯಾತ ಜನಸಮುದಾಯಗಳ ಜನಮನದಲ್ಲಿರುವ ಅಲಿಖಿತ ರೂಪದ ಚರಿತ್ರೆಯ ಆಯಾಮಗಳನ್ನು, ಭಾವನೆಗಳನ್ನು ಕಡೆಗಣಿಸಿದ್ದರಿಂದ ಇತಿಹಾಸದಲ್ಲಿ ಅವು ಸ್ಥಾನಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಚರಿತ್ರೆಯ ರಚನೆಯಲ್ಲಿರುವ ಈ ಬಹುಮುಖ್ಯ ಕೊರತೆಯನ್ನು ತುಂಬಲು ಇಂದು ಮೌಖಿಕ ಪರಂಪರೆಯನ್ನು ಬಳಸಿಕೊಳ್ಳಲಾಗುತ್ತದೆ ಎಂಬುದು ಸಂತಸದ ಸಂಗತಿ. ಮೌಖಿಕ ಪರಂಪರೆಯ ಸಾಮಾಗ್ರಿಗಳಲ್ಲಿ ಕಾಲ್ಪನಿಕತೆ ಸೇರಿಕೊಂಡಿರಬಹುದು, ಹೆಸರುಗಳು ವ್ಯತ್ಯಾಸಗೊಂಡಿರಬಹುದು. ಆದರೆ ಬಹುಜನರ ನೋವು ನಲಿವುಗಳು, ಆಸೆ-ಆಕಾಂಕ್ಷೆಗಳು ಬೇರೆ ಬೇರೆ ರೂಪದಲ್ಲಿ ದಾಖಲಾಗಿ ಪ್ರಸರಿಸುವುದು ಇಂತಹ ಕಂಠಸ್ತ ಪರಂಪರೆಯದ್ದಾಗಿದೆ ಎನ್ನುವುದನ್ನು ಮರೆಯಲಾಗದು.[೧]

ಈ ಹಿನ್ನಲೆಯಲ್ಲಿ ಆಯಾಯ ಪ್ರದೇಶದ ಮೌಖಿಕ ಪರಂಪರೆಯಲ್ಲಿರುವ ಐತಿಹ್ಯ, ಪುರಾಣ, ಕಥೆ, ಕಾವ್ಯದ ಅಧ್ಯಯನಕ್ಕೆ ತೊಡಗಿದಾಗ ಅಲ್ಲಿಯ ಚರಿತ್ರೆಯ ಇನ್ನೊಂದು ಮುಖದ ಪರಿಚಯ ವಾಗುತ್ತದೆ. ಅಲ್ಲದೆ ಇತಿಹಾಸ ರಚನಾಕಾರನಿಗೆ ಅದೆಷ್ಟೋ ಸಂಗತಿಗಳನ್ನು ಮೌಖಿಕ ಸಾಮಾಗ್ರಿ ಒದಗಿಸುತ್ತದೆ. ಹೀಗಾಗಿ ಕಂಠಸ್ತ ಪರಂಪರೆಯ ಕವಲುಗಳಾದ ಐತಿಹ್ಯಗಳನ್ನು ಬಳಸಿಕೊಳ್ಳುವುದರ ಮೂಲಕ ಇತಿಹಾಸವನ್ನು ಇನ್ನೂ ಸತ್ಯದ ನಿಖರತೆಯತ್ತ ದಿಕ್ಕಿನೆಡೆಗೆ ಕೊಂಡಯ್ಯಲು ಸಾಧ್ಯವಾಗುತ್ತದೆ ಅಥವಾ ಕಳಚಿಹೋದ ಇತಿಹಾಸದ ಕೊಂಡಿಗಳನ್ನಾಗಿ ಅವುಗಳನ್ನು ಬಳಸಿಕೊಳ್ಳಲು ಸಹಾಯಕವಾಗುತ್ತದೆ.

ನಮ್ಮ ಸಂಸ್ಕೃತಿಯಲ್ಲಿ ನಂಬಿಕೆ, ಸಂಪ್ರದಾಯ, ಆಚರಣೆಗಳು, ದೈವಿಕ ಆರಾಧನೆಗಳು ಹಾಸುಹೊಕ್ಕಾಗಿರುವುದನ್ನು ಕಾಣುತ್ತೇವೆ. ಕೆಲವೊಂದು ಪ್ರದೇಶಗಳಲ್ಲಿ ಈ ಹಿನ್ನಲೆಯ ಅನೇಕ ಐತಿಹ್ಯಗಳನ್ನು ಒಳಗೊಂಡ ಕಥೆಗಳು ಕಂಡುಬರುವ ಸಂಗತಿ ಸಾಮಾನ್ಯವಾದುದು. ಐತಿಹ್ಯಗಳು ಮಾನವನ ಸಾಮಾಜಿಕ ಜೀವನಕ್ಕೆ ಹತ್ತಿರವಾದ ಹಾಗೂ ನಡೆಯಬಹುದಾದ ಘಟನೆಗಳನ್ನು ಆಧಾರಸಹಿತವಾಗಿ ಹಾಗೂ ವಾಸ್ತವಕ್ಕೆ ಹತ್ತಿರದಲ್ಲಿನ ವಿಚಾರಗಳನ್ನು ಬಿಂಬಿಸುವ ಮೌಖಿಕ ಸಾಹಿತ್ಯದ ಘಟನೆಯ ತುಣುಕುಗಳಂತೆ ಕಂಡುಬರುತ್ತವೆ. ಇವು ಪ್ರಾಚೀನವಾದ ಚಾರಿತ್ರಿಕ ಘಟನೆಗಳ

ಪಳಿಯುಳಿಕೆಗಳು ಎಂಬಂತೆ ತೋರಿದರೂ, ಬಹುಮಟ್ಟಿಗೆ ಸತ್ಯಾಂಶದಿಂದ ಕೂಡಿರುತ್ತವೆ. ಹಾಗೆಯೇ ಚಾರಿತ್ರಿಕ, ಪೌರಾಣಿಕ ಹಾಗೂ ಕಾಲ್ಪನಿಕ ಅಂಶಗಳಿಂದ ಕೂಡಿ ಆಕರ್ಷಿತವಾಗಿರುತ್ತವೆ. ಅವುಗಳಲ್ಲಿಯ ಚಾರಿತ್ರಿಕ ಹಾಗೂ ಕಲ್ಪಿತ ಅಂಶಗಳನ್ನು ಸೂಕ್ಷ್ಮವಾಗಿ ಬೇರ್ಪಡಿಸಿ ಚಾರಿತ್ರಿಕ ಸತ್ಯವನ್ನು ಗುರುತಿಸುವುದು ಒಂದು ನೆಲೆಯಾದರೆ, ನಂಬಿಕೊಂಡಿರುವ ಚಾರಿತ್ರಿಕ ಹಾಗೂ ಕಾಲ್ಪನಿಕತೆಯನ್ನೊಳಗೊಂಡ ಐತಿಹ್ಯಗಳೇ ಸತ್ಯ ಇತಿಹಾಸವೆಂದು ನಂಬಿಕೊಂಡಿರುವುದು ಮತ್ತೊಂದು ನೆಲೆಯಾಗಿದೆ. ಹೀಗಾಗಿ ಪುರಾತತ್ವ ಅಧ್ಯಯನಗಳ ಆಕರಗಳ ಜೊತೆ ಜೊತೆಗೆ ಈ ಮೌಖಿಕ ಆಕರಗಳ ಪ್ರಭೇದಗಳಾದ ಐತಿಹ್ಯಗಳನ್ನು ಬಳಸಿಕೊಳ್ಳುವದು ಮುಖ್ಯವಾಗಿದೆ.

ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ, ಅದ್ಭುತವೂ ಆದ ಸನ್ನಿವೇಶವನ್ನು ಒಳಗೊಳ್ಳುತ್ತಾ ತಲೆಮಾರುಗಳ ಮೂಲಕ ಹರಿದುಬರುವಾಗ ಬಹುಶಃ ಐತಿಹ್ಯರೂಪುಗೊಂಡಿರಬೇಕೆಂದು ತೋರುತ್ತದೆ. ಅಂದರೆ ಐತಿಹ್ಯಗಳು ವ್ಯಕ್ತಿಗಳ, ಸ್ಥಳಗಳ, ಅಥವಾ ಘಟನೆಗಳ ವಾಸ್ತವ ಅಥವಾ ತೋರಿಕೆಯ ನಂಬಿಕೆಗಳನ್ನೊಳಗೊಂಡ ಕಥನಗಳಾಗಿವೆ. 'ಲೆಜೆಂಡ್'ಗಳೆಂದು ಕರೆಯಲ್ಪಡುವ ಐತಿಹ್ಯಗಳು ಪ್ರಪಂಚದ ವಿವಿಧ ರಾಷ್ಟ್ರಗಳಲ್ಲೂ ಅಸ್ತಿತ್ವದಲ್ಲಿವೆ. ವೈಚಾರಿಕತೆ ಮತ್ತು ನಾಗರಿಕತೆಯ ಪರಿಣಾಮದಿಂದಾಗಿ ಒಂದು ದೇಶದಲ್ಲಿ ಇವುಗಳ ಸಂಖ್ಯೆ ಕಡಿಮೆಪ್ರಮಾಣದಲ್ಲೂ, ನಂಬಿಕೆ, ಸಂಪ್ರದಾಯ ದೈವಿಕತೆ ಮುಂತಾದವುಗಳ ಪ್ರಭಾವದಿಂದ ಒಂದು ದೇಶದಲ್ಲಿ ಹೆಚ್ಚಿನ ಪ್ರಮಾಣದಲ್ಲೂ ಈ ಐತಿಹ್ಯಗಳು ಬೆಳೆದುಕೊಂಡು ಬಂದಿವೆ. ಇವುಗಳ ಸಂಖ್ಯೆ ಭಾರತದಲ್ಲಿಯೂ ವಿಪುಲವಾಗಿ ಕಂಡುಬರುತ್ತದೆ. ಅವುಗಳು ತಮ್ಮ ಹಿನ್ನೆಲೆಯ ಸುರಳಿ ಬಿಚ್ಚುತ್ತಾ ನಮ್ಮನ್ನು ಹಿಂದಿನ ಕಾಲಕ್ಕೊಯ್ಯುತ್ತವೆ.

ಐತಿಹ್ಯದ ಅರ್ಥವನ್ನು ತಿಳಿಯ ಹೊರಟರೆ ಇದು 'ಇತಿ', 'ಇತಿಹ' ಎನ್ನುವ ಸಂಸ್ಕೃತ ರೂಪದಿಂದ ನಿಷ್ಪನ್ನವಾಗಿದೆ. ಈ ಶಬ್ದರೂಪಗಳಿಗೆ ಹೀಗೆ, ಹೀಗಿತ್ತು, ಹೀಗೆ ನಡೆದದ್ದು, ಹೀಗಿರಬೇಕು[೧] ಎಂಬ ಮುಂತಾದ ಅರ್ಥಗಳಿವೆ. ಇಂದು ನಾವು ಯಾವುದನ್ನು 'ಐತಿಹ್ಯ' ಎಂದು ಗುರುತಿಸುತ್ತೇವೆಯೋ ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆ ಎಂಬ ವಿಶ್ವಾಸ ಅದರ ಪ್ರಸಾರಕದಲ್ಲಿರುತ್ತದೆ. ಐತಿಹ್ಯವೆಂದರೆ ಜನಪದರು ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಪೌರಾಣಿಕ ಅಥವಾ ಇತಿಹಾಸದ ಘಟನೆಗಳನ್ನು ತಮ್ಮದೆ ಶೈಲಿಯಲ್ಲಿ ನಿರೂಪಿಸುದಕ್ಕೆ, ಗುರುತಿಸುವುದಕ್ಕೆ ಐತಿಹ್ಯ[೨] ಎನ್ನುತ್ತಾರೆ. ಈ ಅಂಶವನ್ನು ಅರಿತುಕೊಂಡೇ ಜಾನಪದ ವಿದ್ವಾಂಸರು ಈ ಜನಪದ ಸಾಹಿತ್ಯದ ಪ್ರಕಾರವನ್ನು 'ಐತಿಹ್ಯ'ವೆಂದು ಕರೆದರು. ಹಾಗೆ ನೋಡಿದರೆ ಚರಿತ್ರೆಯ ಸಂವಾದಿ ಪದವಾದ 'ಇತಿಹಾಸ'ವೂ ಇತಿ, 'ಇತಿಹ' ರೂಪಗಳಿಂದಲೇ ನಿಷ್ಪನ್ನವಾಗಿದೆ. ಇವೆರಡೂ ಪದಗಳ ಸಾಮ್ಯಗಳನ್ನು ತಿಳಿಯ ಹೊರಟರೆ ಅವುಗಳ ಪದಗಳು ಧ್ವನಿಸುವ ಅರ್ಥ, ಸೂಚಿಸುವ ವಸ್ತುವಿಷಯಗಳಲ್ಲಿ ಸಾಮ್ಯವಿದೆ. 'ಇತಿಹಾಸ'ವೆನ್ನುವುದು ನಡೆದ ಘಟನೆಗಳ, ಲಿಖಿತ ಆಧಾರಗಳ

ದಾಖಲಾತಿ ನಿರೂಪಣೆ ಎಂದು ತಿಳಿಯಲಾಗುತ್ತದೆ. ಶಾಸನ, ಗ್ರಂಥ ಸಾಹಿತ್ಯ, ವಿದೇಶಿ ಪ್ರವಾಸಿಗರ ಬರಹಗಳು, ಬಖೈರುಗಳು, ನಾಣ್ಯಗಳು, ಉತ್ಖನನದ ಮೂಲಕ ಸಂಗ್ರಹಿಸಿದ ಅವಶೇಷಗಳು, ಪಳಿಯುಳಿಕೆಗಳು ಮುಂತಾದವುಗಳ ಜೊತೆಗೆ ನಡವಳಿಕೆ, ಸಂಪ್ರದಾಯಗಳೂ ಇದರ ರಚನೆಗೆ ಆಕರ ಸಾಮಾಗ್ರಿಗಳಾಗುತ್ತವೆ.

'ಐತಿಹ್ಯ'ವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ ಹಿಂದೆ ವಾಸ್ತವವಾಗಿ ನಡೆದದ್ದೇ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ ಘಟನೆಗಳ ಗದ್ಯರೂಪದ ನಿರೂಪಣೆ. ಒಂದು ದೃಷ್ಟಿಯಿಂದ ಇದು ಜನಪದ ಇತಿಹಾಸ. ಇಲ್ಲಿ ಲಿಖಿತ ದಾಖಲೆಗಳೇನೂ ಇರುವುದಿಲ್ಲ. ಇತರ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ -ಸಂಬಂಧ ಕಂಡುಬರುವುದು. ಇನ್ನು ಕೆಲವು ಬಾರಿ ಇವೆರಡೂ ತೀರಾ ವ್ಯತ್ಯಸ್ತವೇ ಆಗಿ ಕಾಣಬಹುದು. ಅಂದರೆ 'ಐತಿಹ್ಯ'ವೆಂದು ನಾವಿಂದು ತಿಳಿಯುವ ಈ ಜನಪದ ಇತಿಹಾಸವು ನೈಜ ಘಟನೆಗಳ ನಿರೂಪಣೆಯಾಗಿರಲೂಬಹುದು. ಕೆಲವು ಐತಿಹ್ಯಗಳಲ್ಲಿ ನೈಜ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು, ಅದರ ಸುತ್ತ ಕಲ್ಪಿತಾಂಶಗಳು ಹಬ್ಬಿಕೊಂಡಿರುತ್ತವೆ. ಎಂತಿದ್ದರೂ ಈಗ 'ಐತಿಹ್ಯ'ವನ್ನು ಜನಪದ ಸಾಹಿತ್ಯದ ಒಂದು ಪ್ರಕಾರವಾಗಿ ಪರಿಗಣಿಸಲಾಗುತ್ತದೆ. ಜೊತೆಗೆ 'ಜನಪದ ಇತಿಹಾಸ'ವೆಂದೂ ತಿಳಿಯಲಾಗುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಇತಿಹಾಸ ಮತ್ತು ಸಾಹಿತ್ಯ ಇವೆರಡರ ಅಂಶಗಳೂ ಇದರೊಳಗಿವೆ. ಹಿಂದೆ ನಡೆದ, ನಡೆದಿರಬಹುದಾದ, ಕೇಳದ ಘಟನೆಯೊಂದರ ಪುನರ್‌ಸೃಷ್ಟಿ ಇದಾಗಿದ್ದರೂ ಇಂದು ಇದಕ್ಕೂ ಇತಿಹಾಸ ರಚನೆಗೆ ಒಂದು ಆಕರವಾಗಿ ಬಳಕೆಯಾಗುವ ಸ್ಥಾನ ದೊರೆತಿದೆ.[೪]

ಮನುಷ್ಯನ ಜೀವನದ ಆಂತರಿಕ ವ್ಯವಸ್ಥೆಯ ಕುರುಹನ್ನು ಸಂಸ್ಕೃತಿಯೆನ್ನುತ್ತಾರೆ. ಅಂದರೆ ಮಾನವ ಜೀವನದ ಅಂತರಂಗದ ಪಕ್ವತೆಯೇ ಸಂಸ್ಕೃತಿಯೆನಿಸುತ್ತದೆ. ಈ ಸಂಸ್ಕೃತಿಗೂ (ಅಂತರಂಗ ಪಕ್ವತೆಗೂ) ಕೆಲವೊಂದು ಕುರುಹುಯೆಂದರೂ, ನಂಬಿಕೆ, ಸಂಪ್ರದಾಯ ಮೊದಲಾದುವನ್ನು ಚರಿತ್ರೆ ರಚನೆಯ ಪ್ರಾಥಮಿಕ ಆಕರಗಳಡಿಯಲ್ಲಿ ಸೇರಿಸುತ್ತಾರೆ. ಏಕೆಂದರೆ ಒಂದು ಕಾಲದ ಸಾಂಸ್ಕೃತಿಕ ಮತ್ತು ಸಾಮಾಜಿಕ ಚರಿತ್ರೆಯಲ್ಲಿ ಆ ಕಾಲದ ಜನರ ಜೀವನ ವಿಧಾನ, ರೀತಿ-ನೀತಿಗಳು, ಸಂಪ್ರದಾಯದ, ನಡಾವಳಿ ಆಚರಣೆಗಳೆಲ್ಲಾ ಬಂದೇ ಬರುತ್ತವೆ. ಹಾಗಾಗಿ ಅವುಗಳನ್ನು ಕೈಬಿಟ್ಟಲ್ಲಿ ಯಾವುದೇ ನಾಡಿನ ಸಾಂಸ್ಕೃತಿಕ ಅಧ್ಯಯನವು ಪರಿಪೂರ್ಣವೆನಿಸಲಾರದು. ಈ ಸಂಪ್ರದಾಯ, ನಂಬಿಕೆ, ಆಚರಣೆಗಳೆಲ್ಲಾ ಜಾನಪದೀಯವಾದವುಗಳು. ಈ ಕಾರಣದಿಂದಾಗಿ ಒಟ್ಟಿನ ಜಾನಪದವು ಇತಿಹಾಸ ರಚನೆಯಲ್ಲಿ ಗಮನಾರ್ಹ ಪಾತ್ರವಹಿಸುತ್ತದೆ ಎನ್ನಬೇಕು.

'ಐತಿಹ್ಯಗಳು' ಲಿಖಿತ (ಶಿಷ್ಟ) ಚರಿತ್ರೆಯಲ್ಲಿಲ್ಲದ ಎಷ್ಟೋ ಅಂಶಗಳನ್ನು, ಸನ್ನಿವೇಶ-ಘಟನೆಗಳನ್ನು ಒಳಗೊಂಡಿದ್ದು, ಈ ನಿಟ್ಟಿನಲ್ಲಿ ನಮ್ಮ ಗಮನ ಸೆಳೆಯುತ್ತವೆ. ನಾಡಿನ ಭೌಗೋಳಿಕ ಸ್ಥಿತಿಗತಿಗಳ

ಬಗೆಗೆ, ಇಲ್ಲಿ ನೆಲಸಿದ್ದ ಪೂರ್ವಿಕರ ಬಗೆಗೆ, ಇಲ್ಲಿಗೆ ಆಕ್ರಮಣ ನಡೆಸಿ ಇಲ್ಲಿನ ಮೂಲಸ್ಥರಿಂದ ರಾಜ್ಯಾಧಿಕಾರವನ್ನು ಕಿತ್ತುಕೊಂಡವರ ಬಗೆಗೆ, ಇಲ್ಲಿನ ಹಿಂದಿದ್ದ ರೀತಿ-ರಿವಾಜುಗಳ ಬಗೆಗೆ, ಧರ್ಮ-ನಂಬಿಕೆಗಳ ಬಗೆಗೆ ಅವು ಬೆಳಕು ಚೆಲ್ಲುತ್ತವೆ. ಗ್ರಂಥಸ್ಥ ಚರಿತ್ರೆಗಳಲ್ಲಿ, ಅವುಗಳಿಗೆ ಮೂಲವಾದ ಶಿಷ್ಟ ಆಕರಗಳಲ್ಲಿ ಉಲ್ಲೇಖಿತರಾದವರು ಮಾತ್ರ ಇತಿಹಾಸ ಪುರುಷರಲ್ಲ (ವ್ಯಕ್ತಿಗಳಲ್ಲ), ಇತರರಲ್ಲಿಯೂ ಅದಕ್ಕಿಂತ ಹೊರತಾದ ಗುಣಗಳನ್ನು ಮೊದಲಾದವುವನ್ನು ತಿಳಿಯಬೇಕಿದ್ದಲ್ಲಿ ನಾವು ಐತಿಹ್ಯಗಳಂತಹ ಮೌಖಿಕ ಆಕರಗಳಿಗೆ ಮೊರೆ ಹೋಗಬೇಕಾಗುತ್ತದೆ.

ಇತಿಹಾಸದ ರಚನೆಯಲ್ಲಿ ಐತಿಹ್ಯದ ಪಾತ್ರಕುರಿತು ಚರ್ಚಿಸುವ ಸಂದರ್ಭದಲ್ಲಿ ಮತ್ತೊಮ್ಮೆ 'ಇತಿಹಾಸ' ಪದದ ಅರ್ಥವ್ಯಾಪ್ತಿಯನ್ನು ತಿಳಿದುಕೊಳ್ಳುವದು ಅನಿವಾರ್ಯ. ಹಿಂದೆ ನಡೆದಿರಬಹುದಾದ ಘಟನೆ ಆ ಘಟನೆಗಳ ದಾಖಲಾತಿ-ನಿರೂಪಣೆಯು ಇತಿಹಾಸ ಅಥವಾ ಚರಿತ್ರೆಯನಿಸುತ್ತದೆ. ಘಟನೆಗಳು ಹಿಂದೆ ಎಷ್ಟೋ ನಡೆದಿರಬಹುದು; ಇಂದೂ ನಡೆದಿರುತ್ತವೆ. ಆದರೆ ನಡೆದಿರಬಹುದಾದ ಎಲ್ಲಾ ಘಟನೆಗಳನ್ನೂ ನಾವಿಂದೂ ಇತಿಹಾಸವೆಂದು ಕರೆಯಲು ಸಿದ್ಧರಿಲ್ಲ. ಅಂದಿನ ಜನಜೀವನದಲ್ಲಿ ಮಹತ್ತರವಾದ ಸ್ಥಾನವನ್ನು ಪಡೆದುಕೊಂಡ, ಜನಜೀವನದ ಮಹತ್ತರ ತಿರುವಿಗೆ ಕಾರಣವಾದ, ಇಂದಿನ ಸಮಾಜದ ರಚನಾತ್ಮಕ ಜೀವನಗತಿಗೆ ಪ್ರೇರಕವಾಗಬಲ್ಲ ಘಟನೆಗಳನ್ನಷ್ಟೇ ನಾವು ಇತಿಹಾಸವೆಂದು ಪರಿಗಣಿಸುತ್ತಿದ್ದೇವೆ.

ಆದರೆ ಹಿಂದೆ ಘಟಿಸಿದ ರಚನಾತ್ಮಕವೆನಿಸಬಲ್ಲ, ಅಂದಿನ ಕಾಲದ ಉದಾತ್ತ ಜೀವನವನ್ನು, ಸಂಸ್ಕೃತಿಯನ್ನು ಎತ್ತಿತೋರಿಸಬಲ್ಲ, ಇಂದಿನ ಸತ್ಸಮಾಜದ ರಚನೆಗೆ ಪ್ರೇರಕವಾಗಬಲ್ಲ ಎಷ್ಟೋ ಘಟನೆ-ಸಂಗತಿಗಳು ಚರಿತ್ರೆಯಲ್ಲಿ ದಾಖಲಾಗದೇ ಹೋದುದುಂಟು. ಕೇವಲ ರಾಜಕೀಯ ಚರಿತ್ರೆಯ ಭಾಗವಾಗಿಯಷ್ಟೇ ನಮ್ಮಲ್ಲಿ ಹಿಂದಿನ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಇತ್ಯಾದಿ ವ್ಯವಸ್ಥೆಗಳು ಚಿತ್ರಣವಾಗಿರುವದು ಶೋಚನೀಯ ಸಂಗತಿಯಾಗಿದೆ. ರಾಜಮಹಾರಾಜರುಗಳು, ಅಧಿಕಾರಿಗಳ ರಾಜಕೀಯ ಜೀವನಕ್ಕಿಂತ ಹೊರಗೂ ಬೃಹತ್ತಾದ ಜೀವನ ಪ್ರವಾಹವೊಂದಿತ್ತು, ಅದುವೇ ಜನಪದ ಜೀವನ. ಅದಕ್ಕೂ ಅದರದ್ದೇ ಆದ ಇತಿಹಾಸವೊಂದಿತ್ತು ಎಂಬುದನ್ನು ಈ ರಾಜಕೀಯ ಚರಿತ್ರೆಯಿಂದ ತಿಳಿಯಲು ಸಾಧ್ಯವಿಲ್ಲ. ಅದನ್ನು ತಿಳಿಯದೆ ಚರಿತ್ರೆ ಅಧ್ಯಯನ ಪರಿಪೂರ್ಣವೆನಿಸುವುದಿಲ್ಲ. ಅದರ ಬಗೆಗೆ ಲಿಖಿತ ದಾಖಲೆಗಳಿಲ್ಲದಿರುವುದೇ ಈ ಕುರಿತ ಗ್ರಂಥಸ್ಥವೂ, ಅಧಿಕೃತವೂ ಆದ ಚರಿತ್ರೆ ರಚನೆಯಾಗದಿರುವುದಕ್ಕೆ ಕಾರಣವೆನ್ನಬಹುದು.

ಇತಿಹಾಸ-ಚರಿತ್ರೆಯೆಂದರೆ ಕೇವಲ ಹಿಂದಣ ರಾಜಕೀಯ ವ್ಯವಸ್ಥೆ ಅಥವಾ ರಾಜಮಹಾರಾಜ, ಅಧಿಕಾರಿಗಳ ಆಡಳಿತ ವ್ಯವಸ್ಥೆ ಮತ್ತು ಜೀವನ ಘಟನೆಗಳಿಗೆ ಸಂಬಂಧಪಟ್ಟ ದಾಖಲಾತಿ ಮಾತ್ರವಲ್ಲ; ಹಿಂದಿನ ಒಟ್ಟು ಸಮಾಜದಲ್ಲಿ ನಡೆದ ಗಮನಾರ್ಹವಾದ, ರಚನಾತ್ಮಕವಾದ, ಇಂದಿನ ಸಮಾಜ ರೂಪೀಕರಣಕ್ಕೆ ಪ್ರೇರಕವಾಗಬಲ್ಲ ಘಟನೆಗಳ ದಾಖಲಾತಿ ಎಂದು ತಿಳಿಯಬೇಕಾಗುತ್ತದೆ.

ಇಲ್ಲಿ ನಾವು ಎದುರಿಸಬೇಕಾಗುವ ಸಮಸ್ಯೆಯು ಈ 'ದಾಖಲಾತಿ' ಎನ್ನುವ ಪದದಲ್ಲಿದೆ. ಇಂದು ನೈಜವೂ, ಅಧಿಕೃತವೂ ಆದ ಇತಿಹಾಸ ರಚನೆಗೆ ನಮಗೆ ಲಿಖಿತ ದಾಖಲೆಗಳು ಬೇಕು. ಮೌಖಿಕ ದಾಖಲಾತಿಗಳು ದಾಖಲೆಗಳೇ ಅಲ್ಲ ಎನ್ನುವವರುಂಟು. ಆದರೆ ದಾಖಲಾತಿ ಅದು ಮೌಖಿಕವಾಗಿರಲಿ, ಲಿಖಿತ ರೂಪದಲ್ಲಿರಲಿ ಹೇಗಿದ್ದರೂ ದಾಖಲೆ-ದಾಖಲೆಯೇ ಎನ್ನುವ ಅಂಶ ಇಲ್ಲಿ ಮುಖ್ಯವಾದುದು.[೫]

ಒಬ್ಬ ಚರಿತ್ರೆಕಾರ ಸಂದಿಗ್ಧ ಸ್ಥಿತಿಯಲ್ಲಿದ್ದಾಗ ಇಂತಹ ಐತಿಹ್ಯಗಳು ಒಂದೊಂದು ಸಲ ಸ್ಪಷ್ಟವಲ್ಲದಿದ್ದರೂ ಅಸ್ಪಷ್ಟ ಬೆಳಕನ್ನು ಚೆಲ್ಲಿ ಸಂಶೋಧಕರಿಗೆ ನೆರವಾಗುತ್ತವೆ. ಹೀಗಾಗಿ ಚರಿತ್ರೆಕಾರ ಚರಿತ್ರೆಗಾಗಿ ಕೆಲವೊಮ್ಮೆ ಐತಿಹ್ಯಗಳನ್ನು ಆಧರಿಸಬೇಕಾಗುತ್ತದೆ. ಐತಿಹ್ಯಗಳು ಎಂದೆಂದಿಗೂ ಇತಿಹಾಸದ ಮಟ್ಟಕ್ಕೆ ಏರಲಾರವು; ಗಣಿಯಲ್ಲಿ ಚಿನ್ನವಿದ್ದಂತೆ, ಹಾಲಿನಲ್ಲಿ ತುಪ್ಪವಿದ್ದಂತೆ ಒಂದು ಐತಿಹ್ಯದಲ್ಲಿ ಚರಿತ್ರಾಂಶ ಮಿಗಿಲಾಗಿದ್ದರೆ ಮತ್ತೊಂದರಲ್ಲಿ ಬಿಂದು ರೂಪದಲ್ಲಿ ಇರಬಹುದು. ಅಂದರೆ ಒಂದು ವಸ್ತು, ಘಟನೆಯ ಮೇಲೆ ಹುಟ್ಟಿದ ಐತಿಹ್ಯ ಸಂಪೂರ್ಣ ಸತ್ಯವೆನ್ನಲೂಬಾರದು. ಪೂರ್ತಿ ಮಿಥ್ಯವೆಂದೂ ಹೇಳಲಿಕ್ಕಾಗದು. ಇವು ಒಂದು ಕಾಲಕ್ಕೆ ಸತ್ಯ ಕಥಗಳೇ. ಹಿನ್ನಲೆಯಲ್ಲಿ ಹುಟ್ಟಿಕೊಳ್ಳುವ ಕಥೆಯಿಂದಾಗಿ ಕಟ್ಟುಕಥೆಯಾಗಿರಬಹುದು. ಇನ್ನೊಂದೆಡೆ ಅತಿಶಯೋಕ್ತಿ, ಮುಗ್ಧಭಕ್ತಿ, ದೈವ-ಧಾರ್ಮಿಕತೆ ಮುಂತಾದವುಗಳ ಪರಿಣಾಮ ಐತಿಹ್ಯಗಳು ಸೃಷ್ಟಿಯಾಗಿ ಅದರಲ್ಲಿ ಯಾವ ಹುರುಳಿಲ್ಲದೆಯೂ ಹೋಗಬಹುದು. ಇನ್ನು ಕೆಲ ಐತಿಹ್ಯಗಳಿಗೆ ವಿಚಿತ್ರ ಕಲ್ಪನೆ, ಬುಡವಿಲ್ಲದ ಊಹೆಗಳು ಆಧಾರವಾಗಿ ನಿಲ್ಲಬಹುದು. ಇಂತಹ ಐತಿಹ್ಯಗಳು ಜನರಲ್ಲಿ ಭಕ್ತಿ, ಗೌರವ, ಭಾವುಕತೆಯನ್ನು ಹುಟ್ಟಿಸುವುದೇ ಮುಖ್ಯ ಗುರಿಯಾಗಿರುತ್ತದೆ.[೬] ಇಂಥಲ್ಲಿ ಸತ್ಯಾಸತ್ಯತೆ, ಚರಿತ್ರೆ ಮುಂತಾದವುಗಳನ್ನು ಶೋಧಿಸುವುದು ತಪ್ಪಾಗುತ್ತದೆ.

ಪ್ರಾಚೀನ ಸಂಸ್ಕೃತಿಯ ಅಧ್ಯಯನದಲ್ಲೂ ಐತಿಹ್ಯಗಳು ಬಹುಮುಖ್ಯವಾದ ಪಾತ್ರವಹಿಸುತ್ತವೆ. ರಾಜ-ರಾಣಿಯರ ಕಥೆಗಳೆಲ್ಲ ಪ್ರಾಚೀನ ಅರಸರಿಗೆ ಸಂಬಂದಿಸಿದ ಐತಿಹ್ಯಗಳೆನಿಸಿವೆ. ಅವರ ಆನೆ, ಕುದುರೆ, ಒಂಟೆ, ಕಾಲಾಳು ಮುಂತಾದ ಬಲಗಳ ಕುರಿತು ಕಥೆಗಳು ತಿಳಿಸುತ್ತವೆ. ಅಂದಿನ ಅರಸರ ಆಳ್ವಿಕೆಯ ಒಂದು ಕಲ್ಪನೆಯನ್ನು ಇವು ಮೂಡಿಸುತ್ತವೆ. ಈ ಆಧಾರದ ಮೇಲಿಂದಲೇ ಅಂದಿನ ಇತಿಹಾಸ ರಚಿಸಲಿಕ್ಕೆ ಅಸಾಧ್ಯವೆನಿಸಿದರೂ ಅರಸರ ಪ್ರಭಾವ ಪರಿಸರ ಆಳ್ವಿಕೆಯ ವಿಧಿ-ವಿಧಾನ, ನ್ಯಾಯ ನಿಷ್ಠುರತೆ ಮುಂತಾದವುಗಳನ್ನು ಜನಮನದಲ್ಲಿ ಬಿಂಬಿಸಲು ಇವು ಸಹಕಾರಿಯಾಗಿವೆ. ಇಂದು ಕಾಣುವ ಕೋಟೆ, ಕೊತ್ತಲಳ, ದುರ್ಗ, ಹಳೆಮರ ಹೀಗೆ ಅವರ ಕುರಿತು ಹೇರಳ ಐತಿಹ್ಯ ನಮ್ಮ ಸೃಷ್ಟಿಯಲ್ಲಿ ಇದ್ದೆ ಇವೆ. ಇವು ಆ ಕಾಲದ ವ್ಯಕ್ತಿಯ ಸಮಾಜದ ಒಂದು ಚರಿತ್ರೆಯನ್ನೇ ಒದಗಿಸು ತ್ತವೆ. ಹಾಗೂ ಇಲ್ಲಿರುವ ಒಂದೊಂದು ಕಲ್ಲಿನ ಡಿಣ್ಣೆಗೂ ಒಂದೊಂದು ಐತಿಹ್ಯವಿದೆ. ಪ್ರಾಚೀನ ಭಾರತೀಯ ಸಂಸ್ಕೃತಿ ಮತ್ತು ಇತಿಹಾಸವನ್ನು ನಾವು ಸರಿಯಾದ ಕ್ರಮದಲ್ಲಿ ತಿಳಿದುಕೊಳ್ಳಲು ಮೊದಲು ಅವಲಂಬಿಸಬೇಕಾದದ್ದು ಶಾಸನಗಳನ್ನು ಹೀಗಾಗಿ ಇವುಗಳು ಇತಿಹಾಸದ ಪ್ರಮಾಣೀಭೂತವಾದ

ಪುನರ್ ನಿರ್ಮಾಣಕ್ಕೆ ಇರುವ ಅತಿ ಪ್ರಮುಖವಾದ ಆಧಾರಗಳಾಗಿವೆ. ಕನ್ನಡ ಸಾಹಿತ್ಯ, ಕಲಾಕೃತಿಗಳ ನಾಣ್ಯಗಳು, ಪರದೇಶದ ಯಾತ್ರಿಕರ ವರದಿಗಳು, ಭೂಮಿಯ ಅಗೆತದಿಂದ ಹೊರಬಿದ್ದ ಅಂಶಗಳು ಇವೆಲ್ಲವೂ ಸಹಾಯಕವಾದರೂ, ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಪರಂಪರೆಯನ್ನು ತಿಳಿಯುವಂತದ್ದು. ಮುಖ್ಯವಾಗಿ ಶಾನಸಗಳಿಂದಲೇ ಇತರ ಆಧಾರಗಳು ತುಂಬಿಕೊಡಲಾರದ ಕೆಲವು ಅಂಶಗಳನ್ನು ಇಲ್ಲಿ ಲಭ್ಯವಾದ ಅನೇಕ ಶಾಸನಗಳಿಂದ ತಿಳಿಯಬಹುದು. ಡಿಣ್ಣೆಗೂ ಒಂದೊಂದು ಐತಿಹ್ಯ ಸೃಷ್ಟಿಯಾಗಿದೆ.[೬]

'ಐತಿಹ್ಯ'ವೂ 'ಇತಿಹಾಸ'ವೂ ಒಂದೇ ಮೂಲದ ಪದಗಳು. ಇತಿಹಾಸಕ್ಕೆ ವಾಸ್ತವಾಂಶಗಳನ್ನು ಅವು ನಿರೂಪಿಸುತ್ತವೆ. ಇಲ್ಲಿ ಕಲ್ಪನೆಗೆ ಎಡೆಯಿಲ್ಲ. ಐತಿಹ್ಯಗಳನ್ನು ನಿಜವಾಗಿ ನಡೆದುವೆಂದೇ ನಂಬಿ ಜನಪದರು ನಿರೂಪಿಸುತ್ತರಾದರೂ ಇವುಗಳಿಗೆ ಯಾವುದೇ ಲಿಖಿತ ಆಧಾರಗಳು ಇರುವುದಿಲ್ಲ. ಇವು ಕಂಠಸ್ಥ ಸಂಪ್ರದಾಯದಲ್ಲಿ ಬೆಳೆಯುತ್ತಾ ಬಂದಿವೆ. ಇತಿಹಾಸದ ಒಂದು ಘಟನೆ ಖಚಿತವಾಗಿ ನಡೆದದ್ದು ಎಂಬುದನ್ನು ಆಧಾರಗಳಿಂದ ಸ್ಪಷ್ಟವಾಗಿ ತಿಳಿಸುತ್ತದೆ. ಆದರೆ ಐತಿಹ್ಯದಲ್ಲಿ ನಿರೂಪಿತವಾಗಿರುವ ವಿಷಯಗಳೆಲ್ಲವೂ ನಿಜವೆಂದೇ ಹೇಳುವುದಕ್ಕೆ ಗಟ್ಟಿಯಾದ ಆಧಾರಗಳು ಸಿಗುವುದಿಲ್ಲ. ಎಲ್ಲ ಐತಿಹ್ಯಗಳಲ್ಲಿ ಸತ್ಯಾಂಶ ಮತ್ತು ಕಾಲ್ಪನಿಕ ಅಂಶಗಳು ವಿವಿಧ ಪ್ರಮಾಣದಲ್ಲಿ ಬೆರೆತಿರುತ್ತವೆ. ಹಾಗಾಗಿ ಐತಿಹ್ಯಗಳಲ್ಲಿ ಕಾಲ್ಪನಿಕಾಂಶವೆಷ್ಟು, ಸತ್ಯಾಂಶವೆಷ್ಟು ಎಂಬುದನ್ನು ಗುರುತಿಸಿ ಇತಿಹಾಸಕಾರ ಅವುಗಳನ್ನು ಇತಿಹಾಸದ ರಚೆನೆಗೆ ಬಳಸಿಕೊಳ್ಳಬೇಕಾಗುತ್ತದೆ. ಎಷ್ಟೋ ವೇಳೆ ಇತಿಹಾಸ ರಚನೆಗೆ ಅತ್ಯಮೂಲ್ಯವಾದ ಆಧಾರಗಳನ್ನು ಐತಿಹ್ಯಗಳು ಒದಗಿಸುತ್ತವೆ. ಆದ್ದರಿಂದ ಇವುಗಳನ್ನು ಇತಿಹಾಸಕಾರರು ಗಂಭೀರವಾಗಿ ಪರಿಗಣಿಸುವ ಅತೀ ಅವಶ್ಯವಿದೆ.

ಒಂದು ಸಾಂಸ್ಕೃತಿಕ ಚರಿತ್ರೆಯನ್ನು ದೇವಾಲಯ, ಸ್ಮಾರಕ, ಶಾಸನ, ನಾಣ್ಯ, ಶಿಲ್ಪ, ಕೆರೆ-ಬಾವಿ, ಚಿತ್ರ ಮುಂತಾದ ಗೋಚರರೂಪದ ಆಕರಗಳಂತೆ ಮೌಖಿಕ ರೂಪದಲ್ಲಿ ಉಳಿದುಕೊಂಡು ಬಂದಿರುವ ಜನಪದ ಸಾಹಿತ್ಯದ ರೂಪಗಳಾದ ಐತಿಹ್ಯಗಳು, ಗಾದೆ, ಒಡಪು, ಹಾಡು, ಕಥೆ ಮುಂತಾದವುಗಳ ಸಹಾಯದಿಂದಲೂ ಕಟ್ಟಬಹುದಾಗಿದೆ. ಅಂದರೆ ಇತಿಹಾಸ ರಚನೆಗೆ ಆಕರಗಳಾದ ಶಾಸನ, ಸ್ಮಾರಕಗಳು, ನಾಣ್ಯಗಳು, ಹಸ್ತಪ್ರತಿಗಳು, ಮಾಸ್ತಿಕಲ್ಲು, ವೀರಗಲ್ಲು, ಶಿಲ್ಪಗಳು ಇತ್ಯಾದಿ ನೆರವಾದರೆ. ಆ ಆಕರಗಳ ಹುಟ್ಟಿನ ಇತಿಹಾಸವನ್ನು ಐತಿಹ್ಯಗಳು ಬಿಚ್ಚಿಡುತ್ತವೆ. ಹೀಗಾಗಿ ಐತಿಹ್ಯಗಳು ಇತಿಹಾಸದ ಆಕರಗಳು ಹೌದು, ಆಕರಗಳ ಇತಿಹಾಸವೂ ಹೌದು. ಈ ಕಾರಣವಾಗಿ ಇತಿಹಾಸವನ್ನು ಮತ್ತು ಇತಿಹಾಸಕ್ಕೆ ನೆರವಾಗುವ ಆಕರಗಳ ಇತಿಹಾಸವನ್ನು ಏಕಕಾಲಕ್ಕೆ ಅಧ್ಯಯನಕ್ಕೊಳಪಡಿಸಬಹುದಾದ ವಿಶೇಷತೆ ಐತಿಹ್ಯಗಳಿಗಿರುವುದರಿಂದ ಪುರಾತತ್ವ ಮತ್ತು ಐತಿಹ್ಯಗಳೆರಡನ್ನು ಸಮನ್ವಯಗೊಳಿಸಿ ಅಧ್ಯಯನ ಕೈಗೊಳ್ಳುವ ಉದ್ದೇಶವನ್ನಿಲ್ಲಿ ಮಾಡಲಾಗಿದೆ.

## ೪.೧. ಶಾಸನೋಕ್ತ ಐತಿಹ್ಯಗಳು

ಶಾಸನಗಳು ಭಾರತದ ಇತಿಹಾಸದ ಜೀವನಾಡಿ. ಶಾಸನ ಸಾಗರವೇ ಭಾರತದಲ್ಲಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಐತಿಹಾಸಿಕ ಆಗುಹೋಗುಗಳ ಬಗ್ಗೆ ನಾವಿಂದು ಮಾತನಾಡಲು ಸಾಧ್ಯವಾಗಿರುವದು ಮೂಲಭೂತವಾಗಿ ಶಾಸನ ಆಕರಗಳಿಂದಾಗಿಯೇ. ಹೀಗಾಗಿ ಶಾಸನಗಳ ಅಭ್ಯಾಸದ ವ್ಯಾಪ್ತಿಯು ವಿಶಾಲವಾದುದು; ಅಷ್ಟೇ ಆಳವಾದುದೂ ಹೌದು. ಹೆಚ್ಚು ಹೆಚ್ಚು ಒಳಹೊಕ್ಕು ನೋಡಿದಂತೆ ನಮ್ಮ ಸಂಸ್ಕೃತಿಯ ವಿವಿಧ ಮುಖಗಳ ಅಭ್ಯಾಸವನ್ನು ಶ್ರೀಮಂತಗೊಳಿಸುವ ಆ ಅಣಿಮುತ್ತುಗಳು ಹೊರಬರುತ್ತಲೇ ಇರುತ್ತವೆ. ಬರೀ ಇತಿಹಾಸವಷ್ಟೇ ಅಲ್ಲ ಭಾಷೆ, ಸಾಹಿತ್ಯ, ಧರ್ಮ. ಅರ್ಥವ್ಯವಸ್ಥೆ, ವಾಸ್ತು ಮತ್ತು ಶಿಲ್ಪಕಲೆ ಹೀಗೆ ವಿವಿಧ ಜ್ಞಾನ ಶಾಖೆಗಳ ಅರಿವಿಗೆ ಪೂರಕವಾಗುವಂತ ವಿಪುಲ ಮಾಹಿತಿ ಇವುಗಳಿಂದ ದೊರೆಯುತ್ತದೆ.[೯] ಮುಂಡರಗಿ ಪರಿಸರದಲ್ಲಿ ಸಹ ಅನೇಕ ಶಾಸನಗಳು ಲಭ್ಯವಾಗಿವೆ. ಆದರೆ ಲಭ್ಯವಾದ ಶಾಸನಗಳಲ್ಲಿಯ ವಿಷಯ ಹೆಚ್ಚಾಗಿ ರಾಜಕೀಯ, ದಾನದತ್ತಿ, ಆಡಳಿತ ವಿಭಾಗ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಮುಂತಾದ ವಿಷಯಗಳಿಗೆ ಸಂಬಂಧಿಸಿವೆ. ಹೀಗಾಗಿ ಕೆಲವೇ ಕೆಲ ಶಾಸನಗಳಲ್ಲಿ ಮಾತ್ರ ಐತಿಹ್ಯಗಳನ್ನು

### ದೊಡ್ಡ ಬಸಪ್ಪ ದೇವಾಲಯ ನಿರ್ಮಾಣದ ಐತಿಹ್ಯ

ಕಲ್ಯಾಣ ಚಾಲುಕ್ಯ ಅರಸ ಆರನೆಯ ವಿಕ್ರಮಾದಿತ್ಯ ದಂಡನಾಯಕನಾಗಿ ಆಳಿದ ಕಿಬ್ಬರಸ ದಂಡಾಧಿಪತಿ ಮತ್ತು ಭಾವಿಕಬ್ಬೆ ದಂಪತಿಗಳ ಮಗನೇ ಅಜ್ಜಯ್ಯನಾಯಕ. ಈತನ ಕುರಿತು ಡಂಬಳದ ಒಂದು ಶಾಸನ ಹೀಗೆ ವರ್ಣಿಸುತ್ತದೆ.

ಕಂದ||   ಪಂಗುರ್ಗ್ಗುಪಕಾರಂ ಗೆಯ್ಯುದೆ
ಎರ ಶೀಳಂ ಸತ್ಯವಚನಮ ನಿಲಿಪುದೇ ನೀ
ಬ್ಬರ್ರದಂ ಬಗೆಗಡಿದೇಂ ಭಾ
ಸುರಮಜ್ಜಯ ನಾಯಕಂ ಮಹಾತ್ಮನೋ ಜಗದೊಳ್[೧೦]

ತ್ರಿನಯನ ಪದ ಪಂಕಜಮಂ
ಕನಸಿನೊಳಂ ಕಣ್ಬು ಕನವರಪ್ಪಂ ಭರದಿಂ
ದೆ ನಮಃ ಶಿವಾಯ ಮಂತ್ರಮ
ನೆನಲಾರ್ದ್ದೊರ್ಕಿಯಜ್ಜಮಯ್ಯನೊಳ್ ಶಿವಭಕ್ತರ್

ಅಂದರೆ ಅಜ್ಜಯ್ಯನಾಯಕ ದಂಡಾಧಿಪತಿಯು ಮಹಿಮಾಶಾಲಿಯಾಗಿದ್ದು ಮಹಾತ್ಮನಂತೆ ಶಿವನನ್ನು ಕನಸಿನೊಳಗೆ ಕಂಡು ನಮಃ ಶಿವಾಯ ಎಂಬ ಪಂಚಾಕ್ಷರ ಮಂತ್ರ ಜಪಿಸುತ್ತಿದ್ದುದ್ದು ಕೇಳುಗರಿಗೆ

ಅಚ್ಚರಿ ಮೂಡಿಸುತ್ತಿತ್ತಂತೆ. ತಾನು ಆಳುವ ಧರ್ಮವೊಳಲಿನ ಭೂಮಿಯನ್ನು ಅನ್ವರ್ಥಕ ಮಾಡಲು "ನಿಜಭುಜಾವಷ್ಟಂಭದಿಂ ನ್ಯಾಯೋಪಾರ್ಜಿತ ವಿತ್ತಮಮಂ ಪವಿತ್ರ. ಮಾಡಲೆಂದ ಧರ್ಮವೊಳಲ್ಗೈಶಾನ್ಯದಿಶಾ ಭಾಗದೊಳ್ ಶಿವಭವನಮಂ ಮಾಡಿಸಿದೆನ್ತಪ್ಪುದೆಂದಡೆ"

ಕಂದ|| ಕುಳಪರ್ವ್ವತಮಮಂ ತಂದದ

ಲಳವಿಗೆವರ ಕಡೆದು ಪಡೆದರೆನಿಸಿಯುಮಂತಾ

ಪೊಳಲಿಂಗೆ ಕಳಶದಂತಿರೆ

ವಿಳಾಸಮಂ ತಾಳ್ದಿತ್ತಜ್ಜಮೇಶ್ವರ ಭವನಂ||

ಅಂದರೆ ಅಜ್ಜಿಮಯ್ಯನಾಯಕ ತನ್ನ ಶಕ್ತಿ ಸಾಮರ್ಥ್ಯಗಳಿಂದ ನ್ಯಾಯಯುತವಾಗಿ ಬಂದ ಧನಕನ ಕಾದಿಗಳಿಂದ ಪವಿತ್ರವೆಂಬಂತೆ ಧರ್ಮವೊಳಲಿನ ಈಶಾನ್ಯದಿಕ್ಕಿಗೆ ಪೊಳಲಿಗೆ ಕಳಸದಂತೆ ಕಂಗೊಳಿಸುವ ಅಜ್ಜಮೇಶ್ವರ ಭವನವನ್ನು ಕಟ್ಟಿಸಿದನು. ಈ ಅಜ್ಜಯ್ಯನಾಯಕ ಧರ್ಮವೊಳಲಿನ ಪದಿನರುವರು ಸೆಟ್ಟಿಯರು ಮಹಾನಕರಂಗಳ ಪಾದಪೂಜೆ ಮಾಡಿ ಊರಿನ ಪೂರ್ವದಿಕ್ಕಿನಲ್ಲಿ ಒಂದು ಮತ್ತರ ತೋಟವನ್ನು ದೇವರಿಗೆ ದತ್ತಿಯಾಗಿ ನೀಡಿದುದನ್ನು ಈ ಶಾಸನ ತಿಳಿಸುತ್ತದೆ. ಈತನನ್ನು ಅಜ್ಜಯ್ಯನಾಯಕ, ಅಜ್ಜಮಯ್ಯನೆಂದು ಶಾಸನದಲ್ಲಿ ವರ್ಣಿಸಲಾಗಿದೆ.

ಈ ಅಜ್ಜಮಯ್ಯನು ಧರ್ಮವೊಳಲಿನಲ್ಲಿ ಕುಲಪರ್ವತವನ್ನೇ ತಂದು ಒಂದು ಆಕಾರಕ್ಕೆ ಬರುವಂತೆ ನಿರ್ಮಿಸಿದನೆಂದು ಹಾಗೂ ಅದು ಆ ಧರ್ಮದ (ಡಂಬಳ) ಪಟ್ಟಣಕ್ಕೆ ಕಳಶವಿಟ್ಟಂತೆ ಶೋಭಿಸುತ್ತಿತ್ತೆಂದೂ ಶಾಸನದಲ್ಲಿ ವಿವರಿಸಲಾಗಿದೆ. (ಮಹಾಲಿಂಗ ಯಾಳಗಿ, (ಸಂ) ಮುಂಡರಗಿ ನಾಡ ದರ್ಶನ, ಪುಟ.೧೯)

**ತಾರಾದೇವಿ ಐತಿಹ್ಯ (ಡಂಬಳ)**

ಡಂಬಳದ ೧೧೯೫ರ ಶಾಸನವು 'ನಮೋ ಬುದ್ಧಾಯ' ಎಂಬ ಸಾಂಪ್ರದಾಯಿಕ ಸ್ತುತಿಯಿಂದ ಆರಂಭವಾಗುತ್ತದೆ. ಶಾಸನಗಳಲ್ಲಿ ತಾರಾದೇವಿಯ ಸ್ತುತಿಯು ವಿಸ್ತಾರವಾಗಿ ಬಂದಿರುವುದಲ್ಲದೆ ಅಲ್ಲಿ ಮಾಡಿಸಿದ ವಿಹಾರವನ್ನು ಶ್ರೀಭಗವತೀ ಆರ್ಯ ತಾರಾದೇವಿಯ ವಿಹಾರವೆಂದು ಕರೆದಿದೆ. ತಾರಾದೇವಿಯು ಹರಿ ಕರಿ ಶಿಬಿ ಫಣಿ ತಸ್ಕರ ನಿಗಳ ಜಳಾರ್ಣ್ಣವ ಪಿಶಾಚ ಭಯ ಸಮನಿಸಿ ಕಿರಣಶಾನ್ತಿ ಎಂದು ಅವಳು ಜ್ಞಾನಸಮುದ್ರವನ್ನು ಮಥಿಸಿದ್ದರಿಂದ ಹುಟ್ಟಿದವಳು. ಅವಳನ್ನು 'ಪ್ರಜ್ಞಾ' ಎಂದು ಕರೆಯಲಾಗಿದೆ. ಅವಳು 'ಯಾ ಬುದ್ಧಸ್ಯ ವಿಭೂತಿ ದಾ ತ್ರಿಭುವನೇ ಭೋಧಿಸಸ್ವರೂಪಾ ಪರಾಯಾಹ್ರಿ..." ಭೋಧಿಸ್ವರೂಪಳು, ತಥಾಗತದ ಹೃದಯಾಕಾಶದಲ್ಲಿ ನೆಲೆಸಿದವಳು ಇತ್ಯಾದಿಯಾಗಿ ಸ್ತೋತ್ರ ಮಾಡಲಾಗಿದೆ. ಹಾಗೆಯೇ ಶಾಸನದ ಕೊನೆಯಲ್ಲಿ ಜಗತ್ತಿನ ವಿಷಯದಲ್ಲಿ ಕರುಣ ವ್ಯಾಪಾರ ಚಿಂತಾ ತುರಳಾಗಿರುವ ತಾರೆಯನ್ನು ಮತ್ತೆ ಸ್ತೋತ್ರ ಮಾಡಲಾಗಿದೆ. ಈ ಶಾಸನದಲ್ಲಿ ಬರುವ 'ಪ್ರಜ್ಞಾ'

ಎಂಬ ಮಾತು ತುಂಬಾ ಮಹತ್ವ ಪಡೆದಿದೆ. ಮನುಷ್ಯ ಸಂಪಾದಿಸಬೇಕಾದದ್ದು 'ಪ್ರಜ್ಞಾ' ಅಥವಾ ಶೂನ್ಯತಾ. ಇದನ್ನು ಸಾಧಿಸಲು ಇರುವ ಮಾರ್ಗವೇ 'ಉಪಾನ' ಅಥವಾ ಕರುಣಾ, 'ಪ್ರಜ್ಞಾ' ಎಂಬ 'ವಧು' 'ಉಪಾನ' ಎಂಬ ವರ ಇವರಿಬ್ಬರ ಮಿಲನದಿಂದಲೇ ಮನುಷ್ಯ ಪೂರ್ಣನಾಗುವದು. ವಜ್ರಯಾನದ ಪ್ರಕಾರ 'ಪ್ರಜ್ಞಾ' ಮತ್ತು ಉಪಾನಗಳು ಪ್ರಪಂಚದಲ್ಲಿ ಸ್ತ್ರೀ ಪುರುಷರಿಗೆ ಪರ್ಯಾಯವಾಗಿ ಕಾಣಿಸಿಕೊಂಡಿವೆ. ಈ ಶಾಸನದಲ್ಲಿ ತಾರಾಭಗವತಿಯನ್ನು 'ಪ್ರಜ್ಞಾ' ಎಂದು 'ಭೋಧಿಸ್ವರೂಪ' ಎಂದು ಕರೆಯುವುದನ್ನು ಕಾಣಬಹುದು.

ತಾರಾದೇವಿ ಜಗತ್ತಿನ ರಕ್ಷಕಳು, ದುರ್ಬಲರಿಗೆ ಶಕ್ತಿದಾಯಕಳು, ತಾರಾ ಮಂತ್ರಪಠಣದಿಂದ ಪಾಪ ಪರಿಹಾರವಾಗುವುದು ಮತ್ತು ಅಷ್ಟಸಿದ್ಧಿಗಳು ಲಭಿಸುವವು ಎಂದು ನಂಬಿಕೆ. ಹೀಗಾಗಿ ಅವಳ ಆರಾಧನೆ ಈ ಪಂಥದ ಅನುಯಾಯಿಗಳಿಗೆ ಅವಶ್ಯವೆನಿಸುತ್ತದೆ. ತಾರಾಭಗವತಿಯ ಆರಾಧನೆ ೧೨-೧೩ನೆಯ ಶತಮಾನಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದಿತ್ತೆಂದು ಇಲ್ಲಿಯ ಶಾಸನಗಳು ಸಾಕ್ಷಿ ನುಡಿಯುತ್ತವೆ.[೯]

## ಕೆರೆ ನಿರ್ಮಾಣದ ಐತಿಹ್ಯ

ಹೈತಾಪೂರದ ಮಾರುತಿ ದೇವಾಲಯದಲ್ಲಿರುವ ಕಂಬದಲ್ಲಿರುವ ಶಾಸನವೊಂದು ದೊರೆತಿದ್ದು ಅದರಲ್ಲಿ ಬ್ರಹ್ಮಕ್ಷತ್ರಿಯ ವಂಶದ ಚಾಲುಕ್ಯ ಮನೆತನದ ಬಿಜ್ಜನ ಹೆಂಡತಿಯಾದ ಭಗಿಬ್ಬೆಯು ಕೊವೂಮಾರು ಮತ್ತು ದೊಱವೊಳವು ಇವುಗಳ ನಡುವೆ ಗುಡ್ಡದ ಕೆಳಗೆ ಕೆರೆಯೊಂದನ್ನು ಕಟ್ಟಿಸಿದ ಪ್ರಸ್ತಾಪವಿದೆ.

ಈ ಭಗಿಬ್ಬೆಯನ್ನು "ಬಿಜ್ಜನ ಮನೋವಲ್ಲಭೆ, ಅನವರತ ಸಹಸ್ರ ಭೋಗಗಾಮಿನಿ, ದ್ವಿತೀಯ ಲಕ್ಷ್ಮೀ ಸಮಾನೆಯೆಂದು ಹೊಗಳಲಾಗಿದೆ. ಇವಳು ಶಿವ ದಾಸಿ, ಮಹೇಶ್ವರನ ಪಕ್ಷಪಾತಿಯೂ ಆಗಿದ್ದಳಂತೆ. ಈ ಶಾಸನದಲ್ಲಿ ಉಕ್ತನಾದ ಬಿಜ್ಜನ ಮೂಲಪುರುಷರು ಇಂತಿದ್ದಾರೆ. ಬದ್ದಿಯಮ್ಮ, ಅವನ ಮಗ ಮಡಿದಾರ, ಅವನ ಮಗ ಗೋಕಣ, ಅವನ ಮಗ ಕತ್ತಿಯರ, ಅವನ ಮಗ ಗೋಪಣ್ಣ, ಅವನ ಮಗ ಈ ರಾಜನೇ ಬಿಜ್ಜನ ತಂದೆಯಾಗಿದ್ದನು. ಈ ರೀತಿ ಬಿಜ್ಜನ ಮೂಲಪುರುಷರ ಹಾಗೂ ಭಗಿಬ್ಬೆಯ ಧರ್ಮಕಾರ್ಯ ಕುರಿತು ಈ ಶಾಸನ ಸಾರುತ್ತದೆ. ಈ ಬಿಜ್ಜ ಮಹಾಸಾಮಂತನಾಗಿದ್ದನು.

## ಮಹಾಮಂಡಲೇಶ್ವರ ಕಕ್ಕರಸ

ಚಿಕ್ಕವಡ್ಡಟ್ಟಿ ಶಾಸನದಲ್ಲಿ ಉಲ್ಲೇಖವಾಗಿರುವ ಈ ಮಹಾಮಂಡಲೇಶ್ವರ ಕಕ್ಕರಸನು ಮಕರಧ್ವಜವನ್ನು ಹೊಂದಿದ್ದ ಈತನು ಪರಸ್ತ್ರೀಯರಿಗೆ ಪುತ್ರನೋಪಾದಿಯಲ್ಲಿದ್ದನಂತೆ. ಸುಱ(ರ)ಕ-೧೨, ಅವಗವಾಡಿ-೧೨,ಗಳನ್ನು ರಾಜಧಾನಿ 'ಒಡವಟ್ಟ'ಯಿಂದ ಆಳುತ್ತಿದ್ದನು. ಇವನು 'ದ್ರೋಣಿಕಾದೇವಿ'ಯಿಂದ ವರವನ್ನು ಪಡೆದ ಸುಭಟಚೂಡಾರತ್ನನೆನಿಸಿದ ಕಕ್ಕ ಭಾಪಾಳನನ್ನು ಭಾರವಿ,

ದಿನೇಶಸುತ ಎಂದು ಮುಂತಾಗಿ ಕರೆಯಲಾಗಿದೆ. ಇದರಿಂದ ಈತನು ಸಾಹಿತ್ಯ ಸೃಷ್ಟಿಯನ್ನು ಮಾಡಿರಬೇಕು.

**ಕೆರೆ (ಗೋಣ ಸಮುದ್ರ)**

ಸಾರ್ವಕಾಲಿಕ ಮೌಲ್ಯವನ್ನು ಎತ್ತಿ ಹಿಡಿಯುವ ರೀತಿಯಲ್ಲಿ ಧರ್ಮವೊಳಲಿನಲ್ಲಿ ಗೋಣಸಮುದ್ರವೆಂಬ ದೊಡ್ಡ ಕೆರೆಯೊಂದನ್ನು ಮಾಡಿಸಿದುದನ್ನು ಕಾಣುತ್ತೇವೆ. ಅದು ಬರಿ ಕೆರೆಯಾಗಿರಲಿಲ್ಲ, ಸಮುದ್ರದಷ್ಟು ವಿಸ್ತಾರವಾಗಿತ್ತು. ೧೧೮೪ರ ಡಂಬಳದ ಶಾಸನದಲ್ಲಿ ಉಲ್ಲೇಖಗೊಂಡ ಗೋಣಸಮುದ್ರದ ವರ್ಣನೆ ಹೀಗಿದೆ.

ಎದಧಿಪನು ತಂನ ಗಾಂಭೀ

ರ್ಯ್ಯದ ಪೆಂಪಂ ರತ್ನಜಳದ ಸಮುದಿತಮನಿದಂ

ವಿದಿತಂ ಚಯನೆನಲುಕೆಂ

ಬುದು ಧರ್ಮಾಪುರದಲೆಸದ ಗೋನಸಮುದ್ರಂ[೧೦]

ಅಂದರೆ ಗಾಂಭೀರ್ಯದಿಂದ ಕೂಡಿದ ಸಾಗರದ ಖ್ಯಾತಿಯನ್ನು ಕೀರ್ತಿಸುವಂತೆ, ರತ್ನಜಳದಂತೆ ಗೋನಸಮುದ್ರ ಧರ್ಮಾಪುರದಲ್ಲಿ ಶೋಭಿಸುತ್ತಿತ್ತು ಎಂದು ಈ ಮೇಲಿನ ಪದ್ಯದಲ್ಲಿ ವರ್ಣಿತಗೊಂಡಿದೆ.

ಕೆರೆಯನ್ನು ಯಾರೇ ಕಟ್ಟಿಸಿರಲಿ. ಅದರ ಯೋಗಕ್ಷೇಮದ ಹೊಣೆಯನ್ನು ಆ ಊರಿನ ಜನರು ಹೊರುತ್ತಿದ್ದರು. ಆಗಾಗ್ಗೆ ಕೆರೆಯಲ್ಲಿ ಸೇರಿಕೊಳ್ಳುತ್ತಿದ್ದ ಹೂಳನ್ನು ಅಥವಾ ಒಂಡನ್ನು ತೆಗೆಯಿಸುವುದೇ ಕೆರೆಗೆ ಮಾಡಬೇಕಾಗಿದ್ದ ಮುಖ್ಯ ದುರಸ್ತಿ ಕಾರ್ಯವಾಗಿತ್ತು. ಕಲ್ಯಾಣ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಕಾಲದಲ್ಲಿ ಡಂಬಳದ ಗೋನಸಮುದ್ರದ ತುಂಬ ಮತ್ತು ಇತರೆ ದುರಸ್ತಿ ಕಾರ್ಯವನ್ನು ೧೬ ಜನ ಸೆಟ್ಟಿಯರು ಮಾಡಿಸಿದುದರ ಉಲ್ಲೇಖವಿದೆ.

**೪.೨. ಮೌಖಿಕ ಕಥನಗಳು**

ಸೃಜನಶೀಲವಾದ ಇತಿಹಾಸವನ್ನು ಪ್ರತಿಬಿಂಬಿಸುವ ಮತ್ತು ಇಡೀ ಗತಕಾಲವನ್ನೇ ಒಂದು ಏಕಮಾತ್ರದಲ್ಲಿಯೇ ಜೀವಂತವಾಗಿಸುವ ಶಕ್ತಿ ಮೌಖಿಕ ಕಥನಗಳಿಗಿದೆ. ಇತಿಹಾಸದಲ್ಲಿ ದಾಖಲಾಗದೆ ಹೋಗಿರುವ ಅಂಚಿನ ವಿಷಯಗಳ ಬಗೆಗೆ ಜನರ ಬಾಯಿಂದ ಬಾಯಿಗೆ ಹರಿದು ಬಂದಿರುವ ಅನೇಕ ಮೌಖಿಕ ಕಥನಗಳು ಚಾರಿತ್ರಿಕ ವಿಷಯಗಳ ಬಗೆಗೆ ನಿರೂಪಣೆಯನ್ನು ಮಾಡುತ್ತವೆ. ಈ ಕಥನಗಳು ಚರಿತ್ರೆಯ ಆಚೆಗಿನ ಚರಿತ್ರೆಯನ್ನು ಅಂದರೆ ಇತಿಹಾಸದ ಇತಿಹಾಸವನ್ನು ಮರುಸೃಷ್ಟಿಸುತ್ತವೆ. ಹೀಗಾಗಿ ಸ್ಥಳೀಯ ಇತಿಹಾಸದ ಪುನರ್‌ರಚನೆಯಲ್ಲಿ ಈ ಮೌಖಿಕ ಕಥನಾಧಾರಿತ ಆಕರಗಳ ಅವಶ್ಯಕತೆ ಬಹುಮುಖ್ಯವಾಗಿದೆ.

ಎಷ್ಟೋ ವರ್ಷಗಳಾಚೆಗಿನ ಚಾರಿತ್ರಿಕ ಅಂಶಗಳನ್ನು ಹೇಳುತ್ತಾ ಸಾಗುವ ಮೌಖಿಕ ಕಥನಗಳು ಜನಪದರ ಹಬ್ಬ-ಜಾತ್ರೆ-ಉತ್ಸವಗಳ ಗತಕಾಲದ ಜೀವಂತ ಮಾದರಿಗಳನ್ನು ಸೃಷ್ಟಿಸುತ್ತವೆ. ಗ್ರಾಮ ದೈವಗಳ ಆಚರಣೆಗಳು ಒಂದೇ ಹೊತ್ತಿನಲ್ಲಿ ಆದಿಯುಗವನ್ನು, ಮಧ್ಯಯುಗವನ್ನು, ವರ್ತಮಾನವನ್ನು ಒಟ್ಟಿಗೆ ಸೃಷ್ಟಿಸಿ ಗತಕಾಲವನ್ನು ಅದ್ದೂರಿಯಾಗಿ ಪ್ರತಿಬಿಂಬಿಸುತ್ತವೆ. ಹೀಗೆ ಕಾಲವನ್ನು ಪುನರ್‌ಸೃಷ್ಟಿಸಿ ಅದನ್ನು ಅಭ್ಯಸಿಸುವ ಮೂಲಕ ಕಥನಗಳು ತಮ್ಮ ಇತಿಹಾಸವನ್ನು ಆಗಾಗ್ಗೆ ಪುನರ್ ನವೀಕರಿಸಿಕೊಳ್ಳುತ್ತವೆ. ಚರಿತ್ರೆಯನ್ನು ಹೀಗೆ ಅಭಿನಯಿಸುತ್ತಾ ಅದನ್ನು ಸಾಂಸ್ಕೃತಿಕವಾದ ಆಚರಣೆಯಾಗಿಸಿ ಕೊನೆಗೆ ಇತಿಹಾಸವನ್ನೇ ದೈವವಾಗಿ, ಆಧ್ಯಾತ್ಮಿಕವಾಗಿ, ಐತಿಹಾಸಿಕವಾಗಿ ವಿಸ್ತರಿಸಿಕೊಳ್ಳುವ ಅಸಾಧಾರಣವಾದ ಗುಣ ಈ ಮೌಖಿಕ ಕಥನಗಳಿಗಿದೆ.

ವ್ಯಕ್ತಿಯ ಸ್ಮೃತಿಯ ಹಿನ್ನಲೆಯಲ್ಲಿ ಬಾಯಿಂದ ಬಾಯಿಗೆ ಹರಿದು ಬಂದಿರುವ ಘಟನೆ, ಅರಸ, ಅಸಾಮಾನ್ಯ ವ್ಯಕ್ತಿಗಳ ಸಾಧನೆ, ವೀರಗಲ್ಲು, ಮಾಸ್ತಿಕಲ್ಲು ಮುಂತಾದ ವಿಷಯಗಳ ಹಿಂದಿನ ಅನೇಕ ಐತಿಹಾಸಿಕ ಅಂಶಗಳನ್ನು ತಿಳಿಯಪಡಿಸುವ ಈ ಮೌಖಿಕ ಕಥನಗಳು ಆಕರಗಳಾಗಿರುವುದಷ್ಟೇ ಅಲ್ಲ, ಆಕರಗಳ ಆಕರಗಳಾಗಿಯೂ ಮಹತ್ವವನ್ನು ಹೊಂದಿವೆ. ಅಧ್ಯಯನ ಕ್ಷೇತ್ರದ ಪರಿಸರದಲ್ಲಿಯು ಸಹ ವಿಭಿನ್ನವಾದ ಮೌಖಿಕ ಕಥನಗಳು ಕಂಡುಬರುತ್ತವೆ.

**ಗುಮ್ಮಗೋಳದ ಗೋಣಿಬಸವೇಶ್ವರ ಐತಿಹ್ಯ**

ಮುಂಡರಗಿಯಿಂದ ೨೭ ಕಿ.ಮೀ. ದೂರದಲ್ಲಿರುವ ಚಿಕ್ಕಗ್ರಾಮ ಗುಮ್ಮಗೋಳ. 'ಬಾಗಳಿ' ಪಾಳೇಗಾರ ಸೋಮಶೇಖರ ನಾಯಕನ ಮೊಮ್ಮಗ ಶ್ರೀ ಗೋಣಿಬಸವ ನಿರ್ಮಿಸಿದ ಅರಮನೆಯ ಮಾದರಿಯ ಮಠವೊಂದಿದೆ. ಈ ಗೋಣಿಬಸವೇಶ್ವರನ ಕುರಿತಾದ ಐತಿಹ್ಯ ಹೀಗಿದೆ.

ವಿಜಯನಗರ ಸಾಮ್ರಾಜ್ಯ (೧೫೬೫) ಪತನಾನಂತರ ಸ್ವತಂತ್ರವಾದ ಅನೇಕ ಪಾಳೇಗಾರರಲ್ಲಿ ಸೋಮಶೇಖರ ನಾಯಕನು ಒಬ್ಬ. ಈತನಿಗೆ ಕನಕವ್ವ ಎಂಬ ಒಬ್ಬಳೇ ಮಗಳಿದ್ದಳು. ಪಂಚಗಣಾಧೀಶ್ವರರು ಸಂಚರಿಸುತ್ತಾ 'ಬಾಗಳಿ'ಗೆ ಬಂದು ಕಲ್ಲೇಶ್ವರ ದೇವಾಲಯದಲ್ಲಿ ನೆಲಸಿ ಪೂಜಾವಿಧಿಗಳನ್ನು ಪೂರೈಸುತ್ತಿದ್ದರು. ಆಗ ಆಕಸ್ಮಿಕವಾಗಿ ಭೇಟಿಯಾದ ಕನಕವ್ವ ಹಾಗೂ ಮದ್ದಾನಸ್ವಾಮಿಯವರ ಗಾಂಧರ್ವ ವಿವಾಹದಿಂದ ಜನಿಸಿದ ಮಗುವೇ ಯುಗಪುರುಷ ಶ್ರೀ ಗೋಣಿಬಸವೇಶ್ವರ.

ಬಾಲಕ ಬಸವ ತಂದೆ-ತಾಯಿಗಳ ಆರೈಕೆಯಲ್ಲಿ ಮಹಾನ್ ದೈವಭಕ್ತನಾಗಿ ರೂಪುಗೊಂಡಿದ್ದೊಂದು ವಿಶೇಷ. ಪರರ ಸಂಪತ್ತು ತರುವುದು ನಮಗೆ ಸರಿಯಲ್ಲ ಎಂಬುದನ್ನರಿತ ಬಸವ ಅರಮನೆ ತೊರೆದು ಜೀತಕ್ಕೆ ಸೇರಿದ, ಪ್ರತಿ ಸೋಮವಾರ ಎತ್ತುಗಳನ್ನು ನೇಗಿಲಿಗೆ ಹೂಡದ ಕಾರಣ, ಬಸವಣ್ಣ ಅರಣ್ಯದಿಂದ ಎರಡು ಹುಲಿಗಳನ್ನು ತಂದು ಹಾವನ್ನೇ ಬಾರುಕೋಲು ಮಾಡಿ ಉಳಿಮೆ ಮಾಡಿದನೆಂಬ ಕಥೆಯೊಂದು ಪ್ರಚಲಿತದಲ್ಲಿದೆ. ಇದಕ್ಕೆ ಸಾಕ್ಷಿ ಎಂಬಂತೆ ಹೊಂಡ ಗೋಡೆಯ ಮೇಲೆ ಹುಲಿಯ ಮೇಲೆ ಸವಾರಿ ಮಾಡುತ್ತಿರುವ ಗೋಣಿ ಬಸವನ ಚಿತ್ರವೊಂದಿದೆ.

**ಗುಮ್ಮಗೋಳಕ್ಕೆ ಬಂದ ಹಿನ್ನಲೆ:** ಬಾಗಳಿಯ ಪಾಳೇಗಾರ ಸೋಮಶೇಖರ ನಾಯಕ ಕಾಲವಶವಾದ ಮೇಲೆ, ಬಾಲ ಬಸವನನ್ನು ಪಟ್ಟಕ್ಕೇರಿಸಿದರು. ಹಿಂಸೆ, ಆಕ್ರಮಣ ಎಂದರೆ ಆಗದ ಶ್ರೀಗೋಣಿಬಸವ ಯಾರ ತಂಟೆಗೂ ಹೋಗುತ್ತಿರಲಿಲ್ಲ. ಜನರಿಗೆ ಆಧ್ಯಾತ್ಮದ ದಾಸೋಹಗಳನ್ನು ಏರ್ಪಡಿಸುತ್ತಾ ಸಂಚಾರಿ ಜೀವನ ನಡೆಸಿದ. ಕೆಲವು ದಿನಗಳ ನಂತರ ಕನಕವ್ವ ಮತ್ತು ಮದ್ದಾನ ಸ್ವಾಮಿಗಳು ಕಾಲವಾದರೂ, ಆಗ ಸುತ್ತಲಿನ ಅನೇಕ ಪಾಳೇಗಾರರ ಕಣ್ಣು ಸಮೃದ್ಧ ನಾಡಾದ ಬಾಗಳಿಯತ್ತ ಹೊರಳಿತು.

ಚಿಗಟೇರಿಯ ಶಿವನಯ್ಯ (ಜನಪದದಲ್ಲಿ ಶಿವಪ್ಪ ಎಂದಾಗಿದೆ) ಶಾಂತಿ ನೆಮ್ಮದಿಯ ನಾಡಾದ 'ಬಾಗಳಿ'ಯನ್ನು ವಶಪಡಿಸಿಕೊಳ್ಳಲು ಯೋಜನೆಯೊಂದನ್ನು ರೂಪಿಸಿದ.

ಒಂದು ದಿನ ಶಿವಪ್ಪ, ತನ್ನ ಸೈನಿಕರಿಂದ ಬಾಗಳಿಗೆಗೆ ಮುತ್ತಿಗೆ ಹಾಕಿದ, ಆಸ್ತಿಯ ಮೇಲೆ ಕಿಂಚಿತ್ತು ಆಸೆಯಿಲ್ಲದ ಬಸವ ಬಾಗಳಿ ತೊರೆದು ಪಶ್ಚಿಮದ ಕಡೆ ಪ್ರಯಾಣ ಬೆಳೆಸಿದ. ಸೈನಿಕರು ಬೆನ್ನಟ್ಟಿದರು. ಹೂವಿನಹಡಗಲಿ ತಾಲೂಕಿನ 'ಐನಹಳ್ಳಿ'ಗೆ ಬರುವಷ್ಟರಲ್ಲಿ ಗೋಣಿಬಸವಣ್ಣನನ್ನು ಸಮೀಪಿಸಿದರು. ನೇರವಾಗಿ ಹೊರಟ ಗೋಣಿಬಸವ ಬಲಕ್ಕೆ ತಿರುಗಿ ಊರಿನ ಗುಡಿಸಲುಗಳಿಗೆ ಬೆಂಕಿ ಬಿದ್ದಿದೆ ನೋಡ್ರೊ ಎಂದಾಗ, ಇಡಿ ಊರಿನ ಗುಡಿಸಲುಗಳೆಲ್ಲ ಹೊತ್ತಿ ಉರಿಯುವುದನ್ನು ಕಂಡು ಸೈನಿಕರು ದಂಗಾಗಿ ನಿಂತರು. ರಸ್ತೆಯಲ್ಲಿರುವ ಅಕ್ಕ-ಪಕ್ಕದ ಹುಣಸೆ ಮರಗಳು ಸಹಿತ ಬಲಗಡೆ ತಿರುಗಿದವು. ಇಂದಿಗೂ ಐನಹಳ್ಳಿಯಿಂದ ಅಲ್ಲಿಪುರಕ್ಕೆ ಬರುವ ದಾರಿಯಲ್ಲಿನ ಎಲ್ಲಾ ಹುಣಸೆಮರಗಳು ಬಲಕ್ಕೆ ತಿರುಗಿರುವುದನ್ನು ಈಗಲೂ ಕಾಣಬಹುದು. ಇಂದು ಹುಟ್ಟುವ ಹುಣಸಿ ಸಸಿಗಳು ಬಲಕ್ಕೆ ತಿರುಗತ್ತಲೆ ಬೆಳೆಯುತ್ತಿರುವುದೊಂದು ವಿಜ್ಞಾನ ಜಗತ್ತಿಗೆ ಸವಾಲಾಗಿದೆ.

ಈ ಕಥೆಗೆ ಸಾಕ್ಷಿ ಎಂಬಂತೆ ಸುಮಾರು ನಾಲ್ಕುನೂರು ವರುಷಗಳಿಂದಲೂ ಅಲ್ಲಿಪುರ ಮತ್ತು ಐನಹಳ್ಳಿಯಲ್ಲಿ ಗೋಣಿಬಸವೇಶ್ವರ ರಥೋತ್ಸವದಂದು ಚಿಕ್ಕ ಗುಡಿಸಲು ಮಾಡಿ ಸುಡುವ ಸಂಪ್ರದಾಯವೊಂದು ನಡೆದು ಬಂದಿದೆ.

ಸೈನಿಕರ ಗಮನ ಊರಿನ ಕಡೆ ಹೊರಳಿದಾಗ, ತುಂಗಭದ್ರೆಯ ತಟದ ಅಲ್ಲಿಪುರಕ್ಕೆ ಗೋಣಿ ಬಸವ ಬಂದು ನಿಲ್ಲುತ್ತಾನೆ. ನದಿಯ ಒಡಲು ತುಂಬಿ ಮುನ್ನಡೆಯುತ್ತಿದೆ. ದಾಟಲು ನಾವಿಕರಿಲ್ಲ, ಗೋಣಿ ಬಸವ ಹೆಗಲ ಮೇಲಿನ ಕಂಬಳಿಗಲನ್ನೇ ಗದ್ದುಗೆ ಮಾಡಿ ಕೈಯಲ್ಲಿನ ಬೆತ್ತವನ್ನೇ ಹುಟ್ಟಿನಂತೆ ಬಳಸಿ, ನದಿ ದಾಟಿ ಗುಮ್ಮಗೋಳಕ್ಕೆ ಬರುತ್ತಾನೆ. ಸುಮಾರು ಕ್ರಿ.ಶ.೧೪೦೪ರಲ್ಲಿ ಹಮ್ಮಿಗಿಯ ಜಾಗಿನ ಕೆರೆಯನ್ನು ಕಟ್ಟಿಸಿ (೨೦ ಪ್ರತಾರಗಳನ್ನು ವ್ಯಯಿಸಿದ) ಚಿಕ್ಕಣ್ಣ ಉಪಾಧ್ಯಾಯನ ಮಗ ಗೋಪಣ್ಣ, ಕೆರೆಯ ನೀರನ್ನು ನೀರಾವರಿಗೆ ಬಳಸಿ, ಈ ನಾಡನ್ನು ಸಮೃದ್ಧಿಯ ತಾಣವನ್ನಾಗಿ ಮಾಡಿದ್ದ.

ಗೋಣಿಬಸವ ಇದು ಪ್ರಶಸ್ತ ಸ್ಥಳವೆಂದು ಭಾವಿಸಿ ಇಲ್ಲಿಯೇ ಸ್ಥಳೀಯ ಸಹಕಾರದೊಂದಿಗೆ 'ಬಾಗಳಿ' ಅರಮನೆಯ ಮಾದರಿಯ ಮಠವೊಂದನ್ನು ಕಟ್ಟಿ ನೆಲಸತೊಡಗಿದ.

ಇದರಿಂದ ಆಂತಕಗೊಂಡ ಚಿಗಟೇರಿಯ ಶಿವನಯ್ಯ ತುಂಗಭದ್ರೆ ಆಚೆಯ ದಡದಲ್ಲಿ (ಇಂದಿನ ಅಣೆಕಟ್ಟು ನಿರ್ಮಾಣದ ಸ್ಥಳ) ಒಂದು ಕೋಟೆಯನ್ನು ಕಟ್ಟಿ ಗೋಣಿಬಸವೇಶ್ವರ ಮಠದಲ್ಲಿ ಇರುವ ಗೋಣಿ ಬಸವ ಗುಮ್ಮಗೋಳ ತೊರೆದು, ಅದ್ಯಾತ್ಮದ ತತ್ವೋಪದೇಶಕ್ಕಾಗಿ ದೇಶ ಸಂಚಾರಿಯಾದ ಈ ಸಮಯದಲ್ಲಿ ದೇಶದಲ್ಲಿ ಒಟ್ಟು ೭೭೭ ಮಠಗಳು ನಿರ್ಮಾಣಗೊಂಡಿವೆ ಎಂದು ಹೇಳುತ್ತಾರೆ. ಅವುಗಳಲ್ಲಿ ಪ್ರಮುಖವೆಂದರೆ, ಗದಗ ಜಿಲ್ಲೆಯ ಶಿಂಗಟರಾಯನಕೇರಿ, ಜಂತ್ಲಿ ಶಿರೂರ, ಕೊಪ್ಪಳ ಜಿಲ್ಲೆಯ ಅಳವಂಡಿ, ಮಹಾರಾಷ್ಟ್ರದ ಐನಾಪುರ, ದೆಹಲಿಗಳಲ್ಲಿಯ ಮಠಗಳಾಗಿವೆ. ಇವೆಲ್ಲ ಮಠಗಳಿಂದ ಗುಮ್ಮಗೋಳದ ಮಠ ವಿಶೇಷ ಮತ್ತು ವಿಶಿಷ್ಟ ರೀತಿಯಲ್ಲಿ ನಿರ್ಮಿಸಲಾಗಿದೆ.

**ಡಂಬಳ ಮಲ್ಲವ್ವನ ಹಾಡು**

ಜನಪದ ಗೀತೆಗಳಲ್ಲಿಯು ಸಹ ಐತಿಹಾಸಿಕ ಅಂಶಗಳು ಕಂಡುಬರುತ್ತವೆ. ಅವುಗಳಲ್ಲಿ ಡಂಬಳದ ಮಲ್ಲವ್ವನ ಹಾಡು ಇಲ್ಲಿ ಮುಖ್ಯವಾಗಿದೆ. ಈ ಹಾಡಿನಲ್ಲಿ ಪುಲಕೇಶಿಯ ಬಗ್ಗೆ ಹೇಳುವ ಒಂದು ನುಡಿಯ ಪ್ರಸ್ತಾಪವಿದೆ. ಅದೆಂದರೆ,

ಪುಲಕೇಶಿ ದೊರೆಯಾಳಿ ಕಲಕೆಲ್ಲ ತಿಳಿಯಾಗಿ

ಬಲಕಾಣ ಕೇಳೊಡೆ ಬಸವ | ಡಂಬಳದ

ಕಳಸದ ತೇರ ಎಳದಾಂವ

ಎಂಬ ಹಾಡು ಪುಲಕೇಶಿ ರಾಜ್ಯವಾಳಲು ಪ್ರಾರಂಭಿಸಿದ ರಾಜ್ಯದಲ್ಲಿ (ಬಾದಾಮಿ) ಇದ್ದಂತಹ ಬಂಡಾಯಗಳು, ಜಗಳಗಳು, ಕ್ರಾಂತಿಗಳು ಎಲ್ಲವೂ ನಿಂತು ರಾಜ್ಯದಲ್ಲಿ ಒಳ್ಳೆಯ ರೀತಿಯ ಜಾತ್ರೆಗಳು ಮುಂತಾದ ಶುಭಕಾರ್ಯಗಳು ಪ್ರಾರಂಭವಾದ ಬಗ್ಗೆ ಹೇಳುವುದಲ್ಲದೇ, ಸುಖ-ಶಾಂತಿಯಿಂದ ಜನರು ಬಾಳಿದುದರ ಕಲ್ಪನೆಯನ್ನು ಈ ಹಾಡು ನೀಡುತ್ತದೆ.

ಕೆರೆ ಬತ್ತಿ ಡಂಬಳದ ಮೊರೆಕೇಳಿ ಬಾದಾಮಿ

ಪುಲಕೇಶಿ ಮರುಗ್ಯಾನ ಕರುಣ | ಸಾರ್‍ಯಾನ

ತಿರುಗಿ ಜನದಾಗ ಕಡತವೊ

ಎಂಬ ಸಾಲುಗಳು ರಾಜ್ಯಕ್ಕೆ ಬರಗಾಲ ಬಂದಂತಹ ಸಮಯದಲ್ಲಿ ಜನರು ತೆರಿಗೆ ಕಟ್ಟಲು ಕಷ್ಟವಾಗುತ್ತದೆ ಎಂದು ತಿಳಿದು ಅದನ್ನು ಕಡತಾ ಮಾಡಿ ಜನರಿಗೆ ಅನುಕೂಲಮಾಡಿಕೊಟ್ಟನು. ರಾಜರೆಂದರೆ ಜನತೆಯನ್ನು ಹೇಗೆ ನೋಡಿಕೊಳ್ಳಬೇಕು ಎಂಬುದನ್ನು ಈ ಸಾಲುಗಳು ಮಾರ್ಮಿಕವಾಗಿ ತಿಳಿಸುತ್ತವೆ.

**ಕನಕನರಸಿಂಹಸ್ವಾಮಿ ಐತಿಹ್ಯ**

ಮುಂಡರಗಿ ಪಟ್ಟಣದ ಮಧ್ಯ ಇರುವ ಗುಡ್ಡದ (ಗಿರಿ) ಕೆಳಭಾಗದಲ್ಲಿ ಕನಕನರಸಿಂಹಸ್ವಾಮಿ ದೇವಾಲಯವಿದೆ. ಸುಮಾರು ೨೦೦ ಮೆಟ್ಟಿಲು ಏರಿಕೊಂಡು ಗುಡಿಯನ್ನು ತಲುಪಬೇಕು. ಇದು ಆಧುನಿಕ ಕಾಲಾವಧಿಯಲ್ಲಿ ನಿರ್ಮಾಣವಾಗಿದ್ದರೂ ದೇವಾಲಯಕ್ಕೆ ಸಂಬಂಧಿಸಿದಂತೆ ಹಲವಾರು ಐತಿಹ್ಯಗಳು ಪ್ರಾಚೀನವಾಗಿವೆ. ಮುಂಡರಗಿಯ ಪ್ರಾಚೀನ ಇತಿಹಾಸ ಕಟ್ಟುವಿಕೆಯಲ್ಲಿ ಇವು ಸಹಕಾರಿಯಾಗಿವೆ.

ಕ್ರಿ.ಶ.೧೫-೧೬ನೇ ಶತಮಾನದ ಕಾಲಾವಧಿಯಲ್ಲಿ ಕನಕನಾಯಕನೆಂಬ ಬೇಡರ ಒಡೆಯನು ಮುಂಡರಗಿ ಪರಿಸರವನ್ನು ಆಳುತ್ತಿದ್ದನು. ಮುಂಡರಗಿ. ಕೋಟೆಯ ಪಕ್ಕದಲ್ಲಿ ಕನಕಾಪುರವೆಂಬ ಗ್ರಾಮದಿಂದ ಆಳುತ್ತಿದ್ದನು. ಈ ಭಾಗದ ಸಿಂಗಟರಾಯನಕೇರಿ ಸಿಂಗಟನಾಯಕನಿಂದ, ಗೋಲಗೇರಿ ಗೊಲ್ಲನಾಯಕನಿಂದ ನಿರ್ಮಿತವಾದಂತೆ ಹೇಳಲಾಗುತ್ತದೆ. ಸುಮಾರು ೪-೫ ಶತಮಾನಗಳು ಪೂರ್ವದಲ್ಲಿ ಈ ಮೂವರು ಅತ್ಯಂತ ಪ್ರಬಲರಾಗಿದ್ದರೆಂದೂ ಸುತ್ತಮುತ್ತಲಿನ ರಾಜ್ಯಗಳನ್ನು ಸುಲಿಯುತ್ತಿದ್ದರೆಂದೂ ಇವರ ಉಪಟಳಕ್ಕೆ ಬೇಸತ್ತ ಆದಿಲ್‌ಶಹನು ಈ ಮೂವರು ನಾಯಕರನ್ನು ಮಟ್ಟಹಾಕಲು ಅನೇಕ ಸಲ ಪ್ರಯತ್ನಿಸಿದರೂ ಸಾಧ್ಯವಾಗದೆ ಹೋಯಿತು. ಕೊನೆಗೆ ಇವರ ಶೌರ್ಯ ಸಾಹಸವನ್ನು ಪ್ರತ್ಯಕ್ಷ ಕಂಡ ವಿಜಾಪುರದ ಆದಿಲ್‌ಷಹಾನು ಆ ಬೇಡರಿಗೆ ಸ್ವತಂತ್ರರಾಗುವಂತೆ ಆಜ್ಞೆ ಮಾಡುವುದರೊಂದಿಗೆ ಅವರಿಗೆ 'ನಾಯಕ' ಪದವಿಯನ್ನಿಟ್ಟು ತನ್ನ ದರಬಾರಿನಲ್ಲಿ ಸನ್ಮಾನಿಸಿದನಂತೆ. ಹೀಗೆ ಆ ಮೂವರುಗೆಳೆಯರು ಈ ಭಾಗದಲ್ಲಿ ತಮ್ಮದೆಯಾದ ಪುಟ್ಟಪಟಾಲಂ ಕಟ್ಟಿಕೊಂಡು ತಮ್ಮ ಅಸ್ತಿತ್ವ ಉಳಿಸಿಕೊಂಡರು. ಹೀಗೆ ಕನಕನಾಯಕನು ಇದ್ದ ಗ್ರಾಮ ಕನಕಾಪುರವಾಯಿತೆಂದು ಕಥೆ ಹೇಳಲಾಗುತ್ತದೆ.

ಎರಡನೇ ಐತಿಹ್ಯದ ಪ್ರಕಾರ ಮುಂಡರಗಿ ಭೀಮರಾಯನ ವಂಶಸ್ಥರಾದ ರಂಗರಾಯರು ಪ್ರತೀ ಶನಿವಾರ ತಪ್ಪದೆ ಕುದುರೆ ಏರಿ ಮುಂಡರಗಿಯಿಂದ ಈಗಿನ ಕೊಪ್ಪಳ ಜಿಲ್ಲೆಯ ಕನಕಗಿರಿಯಲ್ಲಿರುವ ಕನಕನರಸಿಂಹ ದೇವರ ದರ್ಶನ ಪಡೆದುಕೊಂಡು ಅಂದು ಅಲ್ಲಿಯೇ ತಂಗಿ ಮರುದಿವಸ ಮರಳಿ ಬರುತ್ತಿದ್ದರು. ಆದರೆ ತೀವ್ರವಾದ ಕಾಯಿಲೆ ಬಂದ ಕಾರಣ ಒಂದು ಸಲ ಶನಿವಾರ ಕನಕಗಿರಿಗೆ ಹೋಗಲಿಲ್ಲ. ಇದರಿಂದ ತುಂಬಾ ನೊಂದುಕೊಂಡ ರಂಗರಾಯರು ಖಿನ್ನಮನಸ್ಕರಾಗಿ ಮಾರನೇ ವಾರ ಕನಕಗಿರಿಗೆ ತೆರಳಿ ದೇವರ ದರ್ಶನ ಪಡೆದುಕೊಂಡು ಯಥಾಪ್ರಕಾರ ರಾತ್ರಿ ಅಲ್ಲಿಯೇ ಮಲಗುತ್ತಾರೆ. ಹಾಗೆ ಮಲಗಿದಾಗ ಸ್ವಪ್ನದಲ್ಲಿ ಬಂದ ಕನಕನರಸಿಂಹ ದೇವರು "ಭಕ್ತ ಇನ್ನು ಮುಂದೆ ಪ್ರತಿವಾರ ನೀನು ಇಲ್ಲಿಗೆ ಬರುವ ತೊಂದರೆಯನ್ನು ತೆಗೆದುಕೊಳ್ಳಬೇಡ ನಾನೇ ನೀನಿರುವಲ್ಲಿಗೆ ಬಂದು ನೆಲೆಸುತ್ತೇನೆ ಎಂದು ಅಭಯವನ್ನಿತ್ತನು. ಆ ಪ್ರಕಾರ ಕನಕ ನರಸಿಂಹ ಮುಂಡರಗಿ ಬಂದು ನೆಲಸಿದನೆಂಬ ಪ್ರತೀತಿ ಇದೆ.

ಮೂರನೇ ಐತಿಹ್ಯದ ಪ್ರಕಾರ ಉಳವಿಯಿಂದ ಅವಿರಳಜ್ಞಾನಿ ಚೆನ್ನಬಸವಣ್ಣವರ ಕೈಂಕರ್ಯದಲ್ಲಿದ್ದ ಯಲ್ಲಾಪುರದ ಶಿವಯೋಗಿ ವೀರಶೈವ ಧರ್ಮ ಪ್ರಸಾರಕ್ಕೆಂದು ತಂಡಗಳೊಡನೆ 'ಕ್ರಿಯಾಘಟ್ಟಿ'ಯೊಂದಿಗೆ ಪಯಣಿಸುತ್ತ ಕಪೋತಗಿರಿಗೆ ಬಂದಾಗ ಕನಕಪ್ಪನಾಯಕನ ಬೇಡರ ಪಡೆ ಈ ಶಿವಯೋಗಿ ಅವನೊಂದಿಗಿದ್ದ ಕಂಟಲಿ ಎತ್ತು ಹಾಗೂ ಸೇವಕನನ್ನು ತಡೆದು ಶಸ್ತ್ರಗಳನ್ನು ಹಿಡಿದು "ಹೂಂ ನಿಮ್ಮಲ್ಲಿ ಏನೇನಿದೆ ಕೊಡಿ ಇಲ್ಲವಾದರೆ ಇಲ್ಲಿಯೇ ಹತರಾಗುವಿರಿ ಎನ್ನಲು ಅವರ ಮಾತಿಗೆ ಈ ಶಿವಯೋಗಿ ನಸುನಕ್ಕು ನಮ್ಮಲ್ಲೇನಿದೆ? ಎಲ್ಲಾ ಶಿವನದು ನಾವೋ ಜೋಗಿ ಜಂಗಮರು......ನಿಮಗೇನು ಬೇಕು? ಈ ರೀತಿ ಜನರನ್ನಪ ಸುಲಿಯುತ್ತಿರೇಕೆ? ಎಂದರು. ಅದಕ್ಕೆ ಇದೇ ನಮ್ಮ ಉದ್ಯೋಗ. ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕಲ್ಲ" ಎನ್ನಲು ಅವರ ಹಸಿದ ಹೊಟ್ಟೆಗೆ ಅಂಬಲಿಯನ್ನು ಕಂಡು ಅಚ್ಚರಿಗೊಂಡು ಇವನೊಬ್ಬ ಮಹಾತ್ಮನೇ ಇರಬೇಕು ಎಂದು ತಮ್ಮ ನಾಯಕನಿಗೆ ತಿಳಿಸಿದರಂತೆ. ಕನಕನಾಯಕ ಆ ಶಿವಯೋಗಿಯನ್ನು ಕಂಡು ಅವರ ಪೂರ್ವ ತೇಜಸ್ಸಿಗೆ ಮರುಳಾಗಿ ತಮ್ಮಲ್ಲಿಯೇ ಉಳಿಯುವಂತೆ ಬೇಡಿಕೊಂಡನಂತೆ. ಆ ಬೇಡರಲ್ಲಿದ್ದ ಕಾಡುತನವನ್ನು ಹೋಗಲಾಡಿಸಿ ನಾಡಿಗೊಡೆಯರಾಗಿ ಎಂದು ಅಶಿರ್ವದಿಸಿದನಂತೆ. ಕಾಡಬೇಡರನ್ನು ನಾಡನಾಗರಿಕರನ್ನಾಗಿ ಪರಿವರ್ತಿಸಿದ ಆ ಶಿವಯೋಗಿಯೇ ಇಂದು ಈ ಭಾಗದ ಅಪೂರ್ವ ಕ್ರಾಂತಿಯನ್ನುಂಟು ಮಾಡಿರುವ ಮುಂಡರಗಿ ಸಂಸ್ಥಾನಮಠದ ಮೂಲಪುರುಷರು. ಅನ್ನದಾನದ ಮೂಲಕ ಈ ಯೋಗಿಗಳನ್ನು ಅನ್ನದಾನಿ ಮಹಾಸ್ವಾಮಿಗಳೆಂದು ಹೆಸರಿಟ್ಟು ಗೌರವಿಸುವುದರೊಂದಿಗೆ ಕನಕಪ್ಪನಾಯಕ ಆ ಸ್ವಾಮಿಗಳಾಗಿ ಹಳ್ಳದ ದಂಡೆಯ ಮೇಲೆ ಮಠವೊಂದನ್ನು ಕಟ್ಟಿಸಿಕೊಟ್ಟನು.

**ವೀರಭದ್ರಸ್ವಾಮಿ ಮೂಲದ ಐತಿಹ್ಯ**

ಮುಂಡರಗಿ ತಾಲೂಕಿನ ತುಂಗಭದ್ರಾ ನದಿಯ ತಟಾಕದಲ್ಲಿ ಬೆಳಗುತ್ತಿರುವ ಶಿಂಗಟಾಲೂರು ಶ್ರೀಕ್ಷೇತ್ರಕ್ಕೆ ಶತಮಾನಗಳ ಪವಾಡಪೂರಿತ ಇತಿಹಾಸವಿದೆ. ಕಪ್ಪತ್ತಗುಡ್ಡದ ಸಾಲುಗಳ ಬೆಟ್ಟದಲ್ಲಿ ದಕ್ಷಿಣದ ಕೊನೆಯ ಅಂಚಿನ ಬೆಟ್ಟದ ತುದಿಯ ರಮಣೀಯ ನಿಸರ್ಗದ ಎದುರಿಗೆ ಪ್ರಶಾಂತವಾಗಿ ಹರಿಯುವ ತುಂಗಭದ್ರೆಯ ಅಂಚಿನಲ್ಲಿದೆ. ಇಲ್ಲಿಯ ವೀರಭದ್ರಸ್ವಾಮಿಯನ್ನು ಕುರಿತು ಬೇರೆ ಬೇರೆ ರೀತಿಯ ಐತಿಹ್ಯಗಳಿವೆ.

ಮೊದಲನೆಯದಾಗಿ ತುಂಗಭದ್ರಾ ನದಿಯ ದಂಡೆಗೆ ಹೊಂದಿಕೊಂಡ ಕಪ್ಪತ್ತಗುಡ್ಡದ ತುತ್ತ ತುದಿಯಲ್ಲಿದ್ದ ಗವಿಯಲ್ಲಿ ಹನ್ನೊಂದನೆಯ ಶತಮಾನದ ನಂತರ ಶ್ರೀಗವಿಸಿದ್ಧ ಸ್ವಾಮಿಗಳು ತಪಸ್ಸು ಮಾಡುತ್ತಿದ್ದರು. ಈ ಕಲ್ಲು ಕೊರೆಸಿದ ಗವಿಯಲ್ಲಿ ಎರಡು ಈಶ್ವರ ಲಿಂಗಗಳನ್ನು ಪ್ರತಿಷ್ಠಾಪಿಸಿ, ಅಲ್ಲಿ ಲಿಂಗಪೂಜೆ ತಪಸ್ಸು ಅನುಷ್ಠಾನಗೈದು ಸುಪ್ರಸಿದ್ಧ ಮಹಾಶಿವಯೋಗಿಗಳಾಗಿದ್ದರು. ಇಲ್ಲಿ ಒಂದು ಆಕಳು ಈಗಿರುವ ದೇವಾಲಯದ ಹಿಂದೆ ಇರುವ ಮರಡೆ ಮೇಲೆ ದಿನಾಲು ಹೋಗಿ ಹಾಲು ಕರೆದು ಬರುತ್ತಿದ್ದುದನ್ನು ಕಂಡ ಆಕಳ ಒಡೆಯನು ಆ ಆಕಳನ್ನು ಕಟ್ಟಿ ಹಾಕಿದನು. ಆದರೂ ಕೂಡಾ

ಆಕಳು ತನ್ನ ಸರಿಯಾದ ಸಮಯಕ್ಕೆ ಹರಿದುಕೊಂಡು ತುಂಬಿದ ನದಿಯನ್ನು ದಾಟಿ ಹೋಗಿ ಮರಡೆ ಮೇಲೆ ಮತ್ತೆ ಅದೇ ಸ್ಥಳದಲ್ಲಿ ಹಾಲು ಕರೆಯುವುದನ್ನು ಒಡೆಯ ಹಾಗೂ ಗ್ರಾಮದ ಹಿರಿಯರೆಲ್ಲಾ ನೋಡಿ ಆಶ್ಚರ್ಯಗೊಂಡರು. ಈ ಸುದ್ದಿಯನ್ನು ಅಲ್ಲಿಯೇ ಇದ್ದ ಶ್ರೀ ಗವಿಸಿದ್ಧ ಸ್ವಾಮಿಗಳಿಗೆ ತಿಳಿಸಿದರು. ಅಲ್ಲಿ ಶ್ರೀವೀರಭದ್ರ ದೇವರ ಶಿಲಾಪ್ರತಿಮೆ ಇದೆ. ಅದನ್ನು ತಾವು ತಪಸ್ಸು ಮಾಡುತ್ತಿರುವ ಗವಿಯ ಬಲಗಡೆ ಪ್ರತಿಷ್ಠಾಪಿಸಲು ತಿಳಿಸಿದರು. ಶ್ರೀಗಳು ಹೇಳಿದಂತೆ ಮರಡೆ ಮೇಲೆ ಹೋಗಿ ಪೂಜೆ ಪುನಸ್ಕಾರಗಳಿಂದ ಶ್ರೀವೀರಭದ್ರನ ಶಿಲಾ ಪ್ರತಿಮೆಯನ್ನು ಹೊರತೆಗೆಸಿ ಗವಿಯ ಬಲಭಾಗಕ್ಕೆ ಸಂಭ್ರಮದಿಂದ ಪ್ರತಿಷ್ಠಾಪಿಸಲಾಗಿದೆ. ಶ್ರೀವೀರಭದ್ರನ ಮೂರ್ತಿ ಎದ್ದ ಮರಡೆಗೆ ಈಗಲೂ "ಈರಣ್ಣ ಎದ್ದ ಮರಡೆ" ಎಂಬ ಮಾತು ರೂಢಿಯಲ್ಲಿದೆ.

ಎರಡನೇ ಐತಿಹ್ಯದ ಪ್ರಕಾರ ಪ್ರಸ್ತುತ ನೆಲಸಿರುವ ಶ್ರೀವೀರಭದ್ರನ ಗಿರಿಯ ಹಿಂದಿರುವ ಪರ್ವತ ಸಂಜೀವಪ್ಪನ ಬೆಟ್ಟ. ಅದನ್ನು ಸಂಜೀವ ಹನುಮಪ್ಪನ ಗುಡ್ಡ ಎಂತಲೂ ಕರೆಯವರು. ಆ ಗುಡ್ಡದ ಮೇಲೆ ಇರುವ ಈರಣ್ಣನ ಕೊಳ್ಳದಲ್ಲಿ ಉದ್ಭವಿಸಿ, ಅಲ್ಲಿಂದ ಹರಿಯುತ್ತಿರುವ ಗಂಗೆಯನ್ನು ದಾಟಿ ಮುಂದೆ ಹೋಗಬೇಕೆನ್ನುವಷ್ಟರಲ್ಲಿ ಗಂಗಮ್ಮನೇ ತಡೆಯೊಡ್ಡಿ, ನೀನು ಇಲ್ಲಿಯೇ ನೆಲಸಿ ಈ ಪ್ರಾಂತದಲ್ಲಿ ಇರುವ ಭಕ್ತರನ್ನು ಕಾಪಾಡಬೇಕೆಂದು ಪ್ರಾರ್ಥಿಸಿದಾಗ ಈರಣ್ಣನು ಇಲ್ಲಿಯೇ ನೆಲಸಿರುವನೆಂದು ಕಥೆಯಿದೆ.

ಮೂರನೇ ಐತಿಹ್ಯದ ಪ್ರಕಾರ ಈ ವೀರಭದ್ರ ದೇವರು ಈಗ ಪಾಳುಬಿದ್ದಿರುವ (ಹಾಳು ಬಿದ್ದಿರುವ) ಕೋಟೆಯ ಭಾಗದಲ್ಲಿ ಉದ್ಭವಿಸಿಯೋ, ಗ್ರಾಮದ ಹಿರಿಯರ ಕನಸಿನಲ್ಲಿ ಬಂದು ತನ್ನ ಕುರುಹನ್ನು ಹೇಳಿಹೋದನು. ಕನಸಿನ ವಾಣಿಯಂತೆ ಈರಣ್ಣನು (ದೇವರು) ಹೇಳಿದ ಸ್ಥಳದಲ್ಲಿ ನೆಲವನ್ನು ಅಗೆಯಲಾಗಿ, ಅಲ್ಲಿ ಕರಿಶಿಲೆಯ ಈರಣ್ಣನ ಮೂರ್ತಿಯು ಗೋಚರಿಸಿತು. ಅಲ್ಲಿಯೇ ಈರಣ್ಣನ ಗುಡಿಯಲ್ಲಿ ಪ್ರತಿಷ್ಠಾಪನೆಗೊಳಿಸಿದರು. ಆದರೆ ಪುನಃ ಸಕಲ ಭಕ್ತಾದಿಗಳ ಪಾಲಕನಾದ ಶ್ರೀವೀರಭದ್ರನು ಕಪ್ಪತ್ತಗಿರಿಯ ಕೊನೆಯ ಬೆಟ್ಟದಲ್ಲಿ ತನ್ನನ್ನು ಪ್ರತಿಷ್ಠಾಪನೆಗೊಳಿಸಲು ಹೇಳಿ, ಪ್ರತಿ ವರ್ಷ ಮಹಾನವಮಿ ಅಮವಾಸ್ಯೆಯ ಮುನ್ನಾದಿನ ಗ್ರಾಮಕ್ಕೆ ಬಂದು ಭಕ್ತರಿಗೆ ದರ್ಶನ ನೀಡುವ ಭರವಸೆಯನ್ನಿತ್ತು ತನ್ನನ್ನು ಈಗಿರುವ ಸ್ಥಳಕ್ಕೆ ಕರೆದೊಯ್ಯಲು ಅಪ್ಪಣೆ ಕೊಡಿಸಿ ಶ್ರೀಕ್ಷೇತ್ರದಲ್ಲಿ ವಾಸಿಸುತ್ತಿರುವನು.

**ಕಪ್ಪತ್ತಗುಡ್ಡದ ಐತಿಹ್ಯ**

ಕಪ್ಪತ್ತಗುಡ್ಡದ ಬಗೆಗೂ ಸಹ ಬೇರೆ ಬೇರೆ ರೀತಿಯ ಐತಿಹ್ಯಗಳನ್ನು ಜನರು ಹೇಳುತ್ತಾರೆ. ಹಿಂದಿನ ಕಾಲದಲ್ಲಿ ಬೇಟಾಗಾರರು ಬೇಟೆಯಾಡಿ ಪ್ರಾಣಿಗಳನ್ನು ಆಹಾರಕ್ಕೆಂದು ಪಾತ್ರೆಯಲ್ಲಿ ಬೇಯಿಸುತ್ತಿರುವಾಗ ಪಾತ್ರೆಯಲ್ಲಿಯ ಸತ್ತ ಪ್ರಾಣಿಗಳನ್ನು ಮೇಲೆ ಕೆಳಗೆ ಮಾಡುವ ಕುರಿತದ್ದಾಗಿದೆ. ಅಲ್ಲಿ ಬಿದ್ದಿದ್ದ ಕಟ್ಟಿಗೆಯ ತುಂಡನ್ನು ತೆಗೆದುಕೊಂಡು ಸತ್ತ ಪ್ರಾಣಿಗೆ ಮುಟ್ಟಿಸಲು ಅವು

ಜೀವಂತವಾಗಿ ಪಾತ್ರೆಯಿಂದ ಜಿಗಿದು ಹೋದವೆಂದು ಆ ಕಟ್ಟಿಗೆಯು ಸಂಜೀವಿನಿ ಕಟ್ಟಿಗೆಯಂದು ತಿಳಿದುಬಂದಿತೆಂದು ಜನರು ಹೇಳುತ್ತಾರೆ. ಅದರ ದ್ಯೋತಕವಾಗಿ ಕಪ್ಪತಗುಡ್ಡಕ್ಕೆ ಹೋದವರು ಪ್ರತಿಯೊಬ್ಬರೂ ಸಂಜೀವಿನಿ ಕಟ್ಟಿಗೆಯು ಇರಬಹುದೆಂದು ಕಟ್ಟಿಗೆಯ ತುಂಡನ್ನು ತೆಗೆದುಕೊಂಡು ಬರುವ ಸಂಪ್ರದಾಯ ಇಂದಿಗೂ ಇದೆ.

ಇನ್ನೂ ಒಂದು ಗೋಜಿನ ಸಂಗತಿ ಎಂದರೆ ಗುಡ್ಡಹತ್ತಿ ಮೇಲೆ ಹೋದನಂತರ ಅಲ್ಲಲ್ಲಿ ಇರುವ ಸಣ್ಣಸಣ್ಣ ಕಲ್ಲಿನಿಂದ ಚಿಕ್ಕಚಿಕ್ಕ ಮನೆಗಳನ್ನು ಕಟ್ಟುತ್ತಾರೆ. ಮತ್ತು ನಾಲ್ಕು ಕಟ್ಟಿಗೆಗಳನ್ನು ನೆಟ್ಟು ಹಂದರ ಹಾಕುತ್ತಾರೆ. ಹೀಗೆ ಮಾಡಿದರೆ ನಿಜ ಜೀವನದಲ್ಲಿ ಕೂಡ ಮನೆಯನ್ನು ಕಟ್ಟಿಸುವರೆಂದು ಮತ್ತು ಬೇಗನೆ ತಮ್ಮ ಮದುವೆಯಾಗುವದೆಂದು ಜನರ (ಭಾವನೆ) ನಂಬಿಕೆ ಇರುತ್ತದೆ.

ಈ ಕಪ್ಪತ್ತಗುಡ್ಡವು ತರು-ಮರಗಳಿಂದ, ಖನಿಜ ಸಂಪತ್ತಿನಿಂದ, ದೇವಾಲಯಗಳಿಂದ, ಹಳ್ಳ-ಕೊಳ್ಳಗಳಿಂದ, ವನಸ್ಪತಿಯಿಂದ ಕಂಗೊಳಿಸಿ, ಈ ತಾಲೂಕಿನ ಪ್ರಕೃತಿ ಸೌಂದರ್ಯವನ್ನು ಹೆಚ್ಚಿಸಿದೆ. ಇಂತಹ ವಿಶೇಷತೆ ಹೊಂದಿರುವ ಕಪ್ಪತ್ತಗುಡ್ಡದ ಪ್ರದೇಶದಲ್ಲಿ ಅತ್ಯಧಿಕ ಮಳೆ ಬೀಳುತ್ತಿದ್ದಿರಬೇಕು. ಹೀಗಾಗಿಯೇ ಜನಪದರ ಗೀತೆಗಳಲ್ಲಿ ಕಪ್ಪತ್ತಗುಡ್ಡವು ಮಹತ್ವ ಹೊಂದಿದೆ. ಆ ಹಾಡನ್ನು ಉದಾಹರಿಸವುದಾದರೆ

ಗುರಜಿ ಗುರಜಿ ಎಲ್ಲಾಡಿ ಬಂದಿ

ಹಳ್ಳ ಕೊಳ್ಳ ತಿರಗಾಡಿ ಬಂದಿ

ಕಾರ ಮಳಿಯೇ, ಕಪ್ಪತ ಮಳಿಯೆ |

ಹೀಗೆ ಈ ಹಾಡು ಗುಡ್ಡದಲ್ಲಿಯ ಮಳೆಯ ಪ್ರಮಾಣವನ್ನು ತಿಳಿಸುತ್ತದೆ.

ಕಪ್ಪತ್ತಗುಡ್ಡದ ಇನ್ನೊಂದು ವಿಶೇಷತೆಯೆಂದರೆ ಇದು ಔಷಧಿಯ ಸಸ್ಯಗಳ ಆಗರವಾಗಿದ್ದು ಇದರ ಕುರಿತಾಗಿ ಇಲ್ಲಿಯ ವನಸ್ಪತಿಗಳ ಉಲ್ಲೇಖವನ್ನು ಜನಪದ ಗೀತೆಯೊಂದರಲ್ಲಿ ಕಾಣಬಹುದಾಗಿದೆ.

"ಇಲ್ಲಿ ಸಿಗುವ ವನಸ್ಪತಿ ಎಲ್ಲಾ ರೋಗಕ್ಕೆ

ಒಲ್ಲದ ಜನರು ಬಂದು ಒಯ್ಯುತಾರ ತಮ್ಮ ದೇಶಕ್ಕೆ"

ಸುಮಾರು ೨೦೦ ಜಾತಿಯ ಔಷಧೀಯ ಸಸ್ಯಗಲನ್ನು ಕಪ್ಪತಗುಡ್ಡ ಹೊಂದಿದೆ. ತಜ್ಞರ ಪ್ರಕಾರ ೧೧೦ ಔಷಧೀಯ ಸಸ್ಯಗಳನ್ನು ಗುರುತಿಸಿದ್ದಾರೆ. ಮುಂಬೈ, ಪೂಣಾ, ಬೆಂಗಳೂರು, ಬಳ್ಳಾರಿ ಹಾಗೂ ಹೊರರಾಜ್ಯದ ಆಯುರ್ವೇದ ಪಂಡಿತರು ಹಾಗೂ ಸಾಧು ಸಂತರು ಬಂದು ಇಲ್ಲಿಯ ಔಷಧೀಯ ಗಿಡಗಳನ್ನು ಉಪಯೋಗಿಸುತ್ತಿರುವುದು ಇಂದಿಗೂ ಕಂಡುಬರುತ್ತದೆ. ಈ ವೈದರ ಪ್ರಕಾರ ಬೇರೆ ಕಡೆಗೆ ಸಿಗುವ ಔಷಧೀಯ ಗಿಡಗಳಿಗಿಂತ ಇಲ್ಲಿ ಸಿಗುವ ಗಿಡಗಳು ಬಹಳ ಪರಿಣಾಮ ಕಾರಿಯಾಗಿದ್ದು, ಇವುಗಳೆಲ್ಲ ಪಂಚಲೋಹದ ವಾಸನೆ ಇದೆ ಎಂದು ಹೇಳುತ್ತಾರೆ.

**ಜಮಾಲಶಾ ವಲೀ ಐತಿಹ್ಯ (ಜಪದ ಬಾವಿಯ ಐತಿಹ್ಯ)**

ಡಂಬಳದ ತೋಂಟದಾರ್ಯ ಮಠದ ಎಡಗಡೆಯಲ್ಲಿರುವ ಮತ್ತು ಡಂಬಳದ ದೇಸಾಯಿ ಹುತಾತ್ಮ ಕಂಬದ ಹತ್ತಿರ ಜಮಾಲಶಾ ವಲೀ ದರ್ಗಾ ಇದೆ. ಇದು ಡಂಬಳದ ಮುಸ್ಲಿಂ ದೈವ ಕೇಂದ್ರವೂ ಹೌದು. ಈ ಜಮಾಲಶಾ ವಲೀ ಒಬ್ಬ ಮುಸ್ಲಿಂ ಅರಸನ ಐದು ಜನ ಮಕ್ಕಳಲ್ಲಿ ಕೊನೆಯ ಪುತ್ರನಂತೆ. ಅಪ್ಪ ಬೇರೆ ಬೇರೆ ಅರಸರ ಮೇಲೆ ತನ್ನ ಭಾರಿ ಸೈನ್ಯ ಸಮೇತ ಯುದ್ಧಕ್ಕೆ ಹೋಗುತ್ತಿದ್ದನಂತೆ. ಹಾಗೆ ಯುದ್ಧಕ್ಕೆ ಹೋಗಬೇಕಾದರೆ ತನ್ನ ಎಲ್ಲ ಮಕ್ಕಳಿಗೂ ಯುದ್ಧದಲ್ಲಿ ಪಾಲುದಾರರನ್ನಾಗಿ ಮಾಡುತ್ತಿದ್ದ. ಒಮ್ಮೆ ಉಳಿದ ನಾಲ್ಕು ಮಕ್ಕಳು ಯುದ್ಧಕ್ಕೆ ಹೋಗಲು ಸಜ್ಜಾದರೆ ಈ ಜಮಾಲಿಶಾ ವಲೀ ಎಂಬ ಕೊನೆಯ ಮಗ, ಈ ಯುದ್ಧದಲ್ಲಿ ನಾನು ಪಾಲ್ಗೊಳ್ಳು ವುದಿಲ್ಲ, ಎಂದನಂತೆ. ಯಾಕೆ ಎಂದು ಪ್ರಶ್ನಿಸಿದಾಗ 'ನೀನು ಯುದ್ಧಕ್ಕೆ ಹೊರಟಿರುವುದು ನನ್ನ ಗೆಳೆಯನ ಅಪ್ಪನ ಮೇಲೆ' ಎಂದಾಗ, ರಾಜನಿಗೆ ಭಯಂಕರ ಸಿಟ್ಟು ಬಂದು ಇವನನ್ನು ಕೊಲ್ಲಬೇಕೆಂದು ನಿರ್ಧಾರ ಮಾಡಿಕೊಳ್ಳುತ್ತಾನೆ. ತಾನೇ ಕೊಲ್ಲುವುದಕ್ಕಿಂತ ಮಂತ್ರಿಗೆ ಕರೆದು "ಇವನನ್ನು ಕೊಂದು ಹಾಕಿರಿ" ಎಂದು ಆಜ್ಞೆ ಮಾಡುತ್ತಾನೆ. ಆಗ ಮಂತ್ರಿಯು "ಮಗನನ್ನು ಕೊಲ್ಲು ವುದು ಬೇಡ ಪ್ರಭುಗಳೇ, ಗಡಿಪಾರು ಮಾಡಿಬಿಡಿ" ಎಂದನಂತೆ. ಹಾಗೆಯೇ ಆಗಲಿ ಎಂದು ಗಡಿಪಾರು ಮಾಡಿ ಬರಲು ೪ ಜನ ಭಂಟರನ್ನು ಅರಸ ಕಳಿಸುತ್ತಾನೆ. ಆ ಭಂಟರು ಜಮಾಲಶಾ ನನ್ನು ನಡೆಸಿಕೊಂಡು ದೂರದವರೆಗೆ ಬರುತ್ತಾರೆ. ಅಲ್ಲಿ ದೊಡ್ಡ ಹೊಳೆ ತುಂಬಿ ಹರಿಯುತ್ತಿತ್ತು. ಹೊಳೆ ದಂಡಿಗೆ ಬಂದು ನಿಂತು ಹೊಳೆ ದಾಟುವುದು ಹೇಗೆ ಎಂದು ಚಿಂತಿಸತೊಡಗಿದರು. ಆಗ ಸೂರ್ಯ ತನ್ನ ತಾಯಿ ಗರ್ಭಸೇರುವ ತವಕದಲ್ಲಿದ್ದ. ಆ ಸಮಯದಲ್ಲಿ ರಾಜನ ಆಸ್ಥಾನದಲ್ಲಿರುವ 'ಪಂಚಕಲ್ಯಾಣಿ' ಎಂಬ ಕುದುರೆ ತನ್ನ ಪ್ರೀತಿಯ ಅರಸುಕುಮಾರನನ್ನು ಬೆನ್ನಟ್ಟಿ ಹೊಳೆಯ ದಂಡಿಗೆ ಬರುವುದನ್ನು ಜಮಾಲಶಾ ಕಂಡನು. ಅಷ್ಟರೊಳಗೆ ಭಂಟರು ಇಲ್ಲೇ ಇವನನ್ನು ಶಿರಚ್ಛೇದನ ಮಾಡಿ ಹೋಗಿ ಬಿಡೋಣ ಎಂದು ನಿರ್ಧರಿಸುತ್ತಿದ್ದಂತೆ, ಶರವೇಗದಲ್ಲಿ ಬಂದ ಕುದುರೆ ರಾಜಕುಮಾರನನ್ನು ತನ್ನ ಹೆಗಲ ಮೇಲೆ ಕೂಡಿಸಿಕೊಂಡು ತುಂಬಿ ಹರಿಯುವ ಹೊಳೆಯಲ್ಲಿ ಧುಮುಕಿ ಈಜಿ ದಡ ಸೇರಿತು. ಹೀಗೆ ದಡ ಸೇರುತ್ತಿರುವ ಕುದುರೆಯ ಧೈರ್ಯವನ್ನು ನೋಡಿ ಭಂಟರು ಆಶ್ಚರ್ಯಚಕಿತರಾದರಂತೆ. ಕುದುರೆ ತನ್ನ ಯಜಮಾನನನ್ನು ದಂಡೆಗೆ ಇಳಿಸಿ "ನನ್ನ ನಿನ್ನ ಋಣ ತೀರಿತು. ನಿನ್ನ ಹಾದಿ ನಿನಗೆ ನನ್ನ ಹಾದಿ ನನಗೆ" ಎಂದು ಹೇಳಿ ಕಣ್ಣೀರು ಗರೆಯಿತು. ಮತ್ತೆ ಹೊಳೆ ಹಾರಿ ಈಜಿ ತನ್ನ ಜಾಗಕ್ಕೆ ಮರಳಿತು. ನಂತರ ಕುದುರೆ ತನ್ನ ಲಾಯದಲ್ಲಿ ನೀರು, ಆಹಾರ ತಿನ್ನದೆ ಸತ್ತು ಹೋಯಿತಂತೆ.

ಇತ್ತ ಜಮಾಲಶಾನು ತನ್ನ ಪ್ರೀತಿಯ ಕುದುರೆಯ ಸಮಯ ಪ್ರಜ್ಞೆ, ಅದು ತನ್ನ ಮೇಲೆ ಇಟ್ಟ ವಿಶ್ವಾಸವನ್ನು ನೆನೆಯುತ್ತಾ ದೂರದಲ್ಲಿ ಮಿಣುಕು ದೀಪಗಳಿಂದ ಕಂಗೊಳಿಸುತ್ತಿರುವ ಒಂದು ಹಳ್ಳಿಗೆ

ಬರುತ್ತಾನೆ. ಈ ಚಿಕ್ಕ ಬಾಲಕನನ್ನು ನೋಡಿ ಅಲ್ಲಿಯ ಜನ ಅವನಿಗೆ ಊಟ ನೀಡಿ ಮಲಗಲು ಹಚ್ಚಡ ಕೊಟ್ಟು ಅಲ್ಲಿಯೇ ರಾತ್ರಿ ತಂಗಲು ಅವಕಾಶ ಮಾಡಿಕೊಟ್ಟರು. ಮಾರನೇ ದಿನ ಮುಂಜಾನೆ ಹಾಗೆ ನಡೆಯುತ್ತ ಸಿದ್ಧಪರ್ವತಕ್ಕೆ ಬಂದು ಅಲ್ಲಿ ದೊಡ್ಡ ಗಿಡದ ಕೆಳಗೆ ವಿಶ್ರಮಿಸಿದ. ಗಿರಿಯಲ್ಲಿ ಮರುಳಸಿದ್ಧನು ನವಕೋಟಿ ಸಿದ್ಧರೊಡನೆ ನೆಲೆಸಿದ್ದ.

ಒಮ್ಮೆ ಮರುಳಸಿದ್ಧನು ಅಡ್ಡಜಾಡಿ, ದೊಡ್ಡಬೆತ್ತ, ಬಗ್ಗೆರವು ಧರಿಸಿಕೊಂಡು ನವಕೋಟಿ ಸಿದ್ಧರೊಡನೆ ಮಲಗಿದ್ದನಂತೆ. ಆತನ ಸ್ವಪ್ನದಲ್ಲಿ ಜಮಾಲಶಾ ವಲೀ ಎಂಬ ಆ ಹುಡುಗ ಬಿಸಿಲಿನಲ್ಲಿ ಸುಡುವ ಮರಳಿನಲ್ಲಿ ನಡೆಯುತ್ತ ನಡೆಯುತ್ತ 'ಅಲ್ಲಾ' ಎಂದು ಕೂಗುತ್ತಿದ್ದನಂತೆ. ಆ ಶಬ್ದ ಕೈಲಾಸಕ್ಕೆ ಮುಟ್ಟುವಂತೆ ಇತ್ತು. ಆಗ ಮಲಗಿದ್ದ ಮರುಳಸಿದ್ಧ ಎದ್ದುಕುಳಿತು "ಬಂದೆ ಮಗನೇ ಬಂದೇ, ಅಂಜಬೇಡ ಎಂದು ಕೂಗಿದ. ಆಗ ಆತನ ಶಿಷ್ಯರೆಲ್ಲರೂ "ಎಪ್ಪಾ ತಂದೆ ಎಲ್ಲಿಗೆ ಹೊರಟಿರುವೆ"? ಎಂದು ಪ್ರಶ್ನಿಸಿದರು "ಮಕ್ಕಳೇ ಈಗಲೇ ಬರುವೆ. ಅಲ್ಲಿ ಒಬ್ಬ ಭಕ್ತನು ನನ್ನ ದಾರಿಯನ್ನು ಕಾಯುತ್ತಿರುವನು. ಅವನನ್ನು ಕರೆದುಕೊಂಡು ಬರುವೆ" ಒಂದು ಕ್ಷಣದಲ್ಲಿ ಆ ಹುಡುಗನನ್ನು ಹುಡುಕಿ ಕರೆದುಕೊಂಡು ಸಿದ್ಧಪರ್ವತಕ್ಕೆ ಬಂದನು. 'ಅಂಬನ' ತಾಯಿ ದರ್ಶನ ಮಾಡಿಸಿ 'ಇನ್ನು ಮೇಲೆ ನೀನು ಪವಾಡ ಪುರುಷನಾಗುವೆ. ಯಾವುದಕ್ಕೂ ಹೆದರಬೇಡ' ಎಂದು ಮಗುವಿಗೆ ಧೈರ್ಯ ತುಂಬಿದನು. ನಂತರ ತನ್ನ ನವಕೋಟಿ ಶಿಷ್ಯರೊಡಗೂಡಿ ಡಂಬಳಕ್ಕೆ ಆಗಮಿಸುತ್ತಾರೆ.

ಡಂಬಳದಲ್ಲಿ ತೋಂಟದಾರ‍್ಯ ಅರ್ಧನಾರೀಶ್ವರರು ಇದ್ದರು. ಮರುಳಸಿದ್ಧ ಮತ್ತು ಜಮಾಲಶಾನ ಗುಣಗಳನ್ನು ಅವರ ಜ್ಞಾನಲೀಲೆಗಳನ್ನು ತಮ್ಮ ಸುಪ್ತ ನೇತ್ರದಿಂದ ಕಂಡಿದ್ದರು. ಹೀಗಾಗಿ ಮಠದಲ್ಲಿ ಯಾವುದೇ ಕಾರ್ಯಕ್ರಮ ಜರುಗಿದರೂ ಇವರಿಬ್ಬರನ್ನು ಶ್ರೀಗಳು ಬರಮಾಡಿಕೊಳ್ಳುತ್ತಿದ್ದರಂತೆ.

ಹೊಳೆಆಲೂರಿನಲ್ಲಿ ಒಂದು ಕುದುರೆ ಹುಟ್ಟಿತಂತೆ. ಅದರ ಹೆಸರು 'ಪಂಚಕಲ್ಯಾಣಿ'ಯೆಂದು. ಆ ಕುದುರೆ ಮಾರಾಟಕ್ಕೆ ಇಟ್ಟಿದ್ದರು. ಅದನ್ನು ಯಾರೂ ಕೊಳ್ಳುವವರಿರಲಿಲ್ಲ. ಎಷ್ಟೋ ಊರಿನ ದನದ ಜಾತ್ರೆಗಳಿಗೆ ಒಯ್ದು ನಿಲ್ಲಿಸಿದರೂ ಗಿರಾಕಿಗಳು ಕುದುರೆಯನ್ನು ನೋಡಿ ದೂರ ಹೋಗಿ ಬಿಡುತ್ತಿದ್ದರಂತೆ. ಒಂದು ದಿನ ಕುದುರೆಯ ಯಜಮಾನನಿಗೆ ಒಬ್ಬ ಜೋತಿಷ್ಯಗಾರನು ಬಂದು 'ಈ ಕುದುರೆ ಡಂಬಳದ ಅಪ್ಪನವರಿಗೆ ಸಲ್ಲುವ ಕುದುರೆ' ಎಂದು ಹೇಳಿದನಂತೆ. ಆಗ ಆ ಯಜಮಾನ ಡಂಬಳದ ಮಠಕ್ಕೆ ಕುದುರೆಯನ್ನು ತಂದು ಶ್ರೀಗಳ ಸನ್ನಿಧಿಗೆ ಒಪ್ಪಿಸಿ. ಆಶೀರ್ವಾದವನ್ನು ಪಡೆದುಕೊಂಡು ಮರಳಿಸಿದನಂತೆ.

ಶ್ರೀಗಳು ಪ್ರತಿ ಅಮವಾಸ್ಯೆ, ಹುಣ್ಣಿಮೆಗಳಿಗೊಮ್ಮೆ ಮರುಳಸಿದ್ಧರಿಗೆ ಮತ್ತು ಜಮಾಲಿಶಾ ವಾಲೀಯವರಿಗೆ ಮಠಕ್ಕೆ ಕರೆಸಿ ಅವರ ಯೋಗಕ್ಷೇಮ ಕೇಳುತ್ತಿದ್ದರಂತೆ. ಕರೆಸಿದಾಗ ಅವರು ಬಂದವರೇ ಶ್ರೀಗಳ ಸಿಂಹಾಸನದ ಪಕ್ಕಕ್ಕಿರುವ ಕುರ್ಚಿಯ ಮೇಲೆ ಜಮಾಲಶಾ ವಲೀ

ಕುಳಿತುಕೊಳ್ಳುತ್ತಿದ್ದರೆ, ಮರಳಸಿದ್ಧರು ಬಗ್ಗೆರವು ಮೆಟ್ಟಿಕೊಂಡು ದೊಡ್ಡಬೆತ್ತ ಸಮೇತ ಅಡ್ಡಜಾಡಿ ಹೊದ್ದುಕೊಂಡು ಅರ್ಧನಾರೀಶ್ವರರ ಮಗ್ಗುಲಲ್ಲಿ ಕುಳಿತುಕೊಂಡಿದ್ದಾನೆ. ಈತ ಸಾಬ. ಕುರ್ಚಿಯ ಮೇಲೆ ಕೂಡುತ್ತಾನಲ್ಲ ಎಂದು ಡಂಬಳದ ಸಾಂಪ್ರದಾಯಿಕ ಲಿಂಗಾಯಿತರು ನಾವು ಮಾತ್ರ ಶ್ರೀಗಳ ಮುಂದೆ ಹಾಸಿರುವ ಗುಡಾರದ ಮೇಲೆ ಕೂಡ್ರಬೇಕು ಎಂದು ಆಲೋಚಿಸುತ್ತ ಒಳಗಿನಿಂದ ಒಳಗೆ ಇರಸು ಮುರಸು ಮಾಡಿಕೊಂಡರು. ಇಬ್ಬರೂ ಲಿಂಗವಿಲ್ಲದವರು ಎಂದು ಟೀಕಿಸಿದರಂತೆ. ಇದನ್ನು ಅರ್ಥಮಾಡಿಕೊಂಡ ಮರುಳಸಿದ್ಧರು ನಗುತ್ತ...

ನೀವು ಲಿಂಗವಂತರು, ನಾನು ಕುರುಬ, ಲಿಂಗವಿಲ್ಲದ ಭವಿ ಎನ್ನುತ್ತಾ ಇದು ನೋಡಿರಿ ಎಂದು ಲಿಂಗವನ್ನು ತೋರಿಸಿದ ಆಗ ಎಲ್ಲಿ ನೋಡಿದರೂ ಮಠದ ತುಂಬೆಲ್ಲ ಲಿಂಗವೇ ಲಿಂಗವೆನ್ನುವಂತಾಯಿತು. ನಂತರ ಜಮಾಲಿಶಾ ವಲೀಯನ್ನು ಕರೆದುಕೊಂಡು ತನ್ನ ವಾಸಸ್ಥಾನಕ್ಕೆ ಮರುಳಸಿದ್ಧರು ಹೋದರು. ಇತ್ತ ದಿನಂಪ್ರತಿಯಂತೆ ಡಂಬಳದ ಲಿಂಗಾಯತರು, ಜಂಗಮರು ಸ್ನಾನ ಕರ್ಮಾದಿಗಳನ್ನು ಮುಗಿಸಿ ಲಿಂಗಪೂಜೆಯನ್ನು ಮಾಡಲು ಕುಳಿತಾಗ ಅವರ ಲಿಂಗಗಳೆಲ್ಲ ಮಾಯವಾಗಿದ್ದವು. ಈ ಸುದ್ದಿ ಬಹುಬೇಗ ಅರ್ಧನಾರೀಶ್ವರ ಶ್ರೀಗಳಿಗೆ ತಲುಪಿತು. ಆಗ ಶ್ರೀಗಳು "ಮರಳಸಿದ್ದರು ಸಾಮಾನ್ಯರಲ್ಲ. ಮಠದ ತುಂಬೆಲ್ಲ ಎಲ್ಲೆಲ್ಲಿಯೂ ಲಿಂಗವನ್ನೇ ತೋರಿಸಿದ್ದು ನಿಮಗೆ ತಿಳಿದಿದೆ. ನಿಮ್ಮ ಲಿಂಗ ಮರಳಿ ಬರಬೇಕೆಂದರೆ ಅವರಿಂದಲೇ ಪಡೆಯಬೇಕು. ಅದಕ್ಕಾಗಿ ಅವರನ್ನು ಕರೆದುಕೊಂಡು ಬನ್ನಿರಿ ಎಂದಾಗ ಒಬ್ಬಾತ ಹೋಗಿ ಜಮಾಲಿಶಾ ವಲೀ ಮತ್ತು ಮರುಳಸಿದ್ಧರನ್ನು ಭೇಟಿಯಾಗಿ "ಶ್ರೀಗಳು ನಿಮ್ಮನ್ನು ಕರೆಕಳಿಸಿರುವರು. ಅದಕ್ಕೆ ತಾವು ದಯಮಾಡಿಸಬೇಕು" ಎಂದಾಗ "ಯಜಮಾನರೇ ನಾವು ಲಿಂಗವಿಲ್ಲದ ಭವಿಗಳು. ಲಿಂಗಾಯತರಲ್ಲಿಗೆ ಬರುವ ಜರೂರತ್ ಏನಿದೆ? ಎಂದರಂತೆ. ಆಗ ಯಜಮಾನ "ಇದೇ ಲಿಂಗದ ಸಲುವಾಗಿ ಅಪ್ಪನವರು ಕರೆಯಲು ಕಳಿಸಿರುವರು. ನೀವು ಬರಲೇಬೇಕು" ಎಂದು ಮನವೊಲಿಸಿ ಕರೆದುಕೊಂಡು ಶ್ರೀಮಠಕ್ಕೆ ಬಂದರು.

ಮರಳುಸಿದ್ಧರು ಶ್ರೀಮಠಕ್ಕೆ ಪ್ರವೇಶ ಮಾಡುತ್ತಿದ್ದಂತೆ ಅರ್ಧನಾರೀಶ್ವರರು ಬರಮಾಡಿಕೊಂಡು "ಮರುಳಸಿದ್ಧರೇ, ಜಂಗಮರು ಹಸಿದುಕೊಂಡಿರುವರು. ಅವರ ಲಿಂಗವನ್ನು ಕೊಟ್ಟುಬಿಡು" ಎಂದು ಹೇಳಿದರು. ಶ್ರೀಗಳೇ ನಾನು ಲಿಂಗವಿಲ್ಲದ ಭವಿ. ಅವರ ಲಿಂಗ ತೆಗೆದುಕೊಂಡು ನಾನೇನು ಮಾಡಲಿ? ಹೋಗಿರಿ ಆ ಜಪದ ಬಾವಿಯಲ್ಲಿ ನಿಮ್ಮ ಲಿಂಗಗಳು ಇರುವವು" ಎಂದು ಹೇಳಿದೊಡನೆ ಜಂಗಮರೆಲ್ಲರೂ ಓಡಿ ಹೋಗಿ ನೋಡುತ್ತಾರೆ. ಬಾವಿಯಲ್ಲಿ ಲಿಂಗಗಳೆಲ್ಲ ತೇಲಾಡುತ್ತಿದ್ದವು. ಹಿಡಿಯಲಿಕ್ಕೆ ಹೋದರೆ ನೀರಲ್ಲಿ ಮುಳುಗುತ್ತಿದ್ದವು. ಹೀಗಾಗಿ ಎಲ್ಲಾ ಜಂಗಮರು ಮತ್ತೆ ಶ್ರೀಗಳವರ ಮೊರೆ ಹೋಗುತ್ತಾರೆ. "ಮರುಳುಸಿದ್ದರೇ ನೀವೇ ಹೋಗಿ ಆ ಲಿಂಗವನ್ನು ನಿಮ್ಮ ಕೈಯಾರೆ ಕೊಡಿರಿ" ಎಂದು ಹೇಳಿದರು. ಆಗ ಮರುಳುಸಿದ್ದರು ಜಮಾಲಶಾ ವಲಿಯನ್ನು ಕರೆದುಕೊಂಡು ಜಪದ ಬಾವಿಗೆ ಬರುತ್ತಾರೆ. ಎಲ್ಲಾ ಲಿಂಗಗಳು ದಂಡೆಗೆ ಬಂದವು. ಒಂದೊಂದನ್ನು

ಎತ್ತಿ ಮರುಳಸಿದ್ಧರು ಎಲ್ಲ ಜಂಗಮರಿಗೆ ಒಂದೊಂದಾಗಿ ಹಂಚಿದರಂತೆ. ಮರಳಿ ಮಠಕ್ಕೆ ಬಂದು ಅರ್ಧನಾರೀಶ್ವರ ಮಹಾಸ್ವಾಮಿಗಳವರ ಸನ್ನಿಧಿಯಲ್ಲಿ ಒಂದು ಮಾತು ಹೇಳಿದರಂತೆ ಕುರುಬ ಎಂದು ಘೋಷಣೆ ಮಾಡಿದರಲ್ಲ ನನ್ನನ್ನು ಕಂಡ ಕಂಡವರ ಕಾಲು ಹಿಡಿಸುತ್ತೇನೆ ಎಂದು ಸಾರಿದ. ತನ್ನ ತಂಗುದಾಣಕ್ಕೆ ಮರಳಿ ಕಂಡ ಕಂಡವರ ಕಾಲು ಹಿಡಿಸುವುದೆಂದರೆ ಏನು? ಈ ಧರ್ಮಾಪುರದಲ್ಲಿ ನನಗೆ (ಮರುಳಸಿದ್ಧ) ಕುರುಬರು ಪೂಜೆ ಮಾಡುತ್ತಾರೆ. ಹಾರುಗೇರಿಯ ಹಡಪದರು ಪೂಜೆ ಮಾಡುವರು. ಬಾಗೇವಾಡಿಯಲ್ಲಿ ಬಡಿಗೇರರು, ಪಾಂಚಾಳರು ಪೂಜಿಸುವರು. ಕೆಲೂರದಲ್ಲಿ ವಾಲ್ಮೀಕಿ ಜನಾಂಗದವರು ಪೂಜಿಸುವರು. ಉಜ್ಜಯಿನಿಯಲ್ಲಿ ಬ್ರಾಹ್ಮಣರು ಪೂಜಿಸುವರು ಎಂದು ಅಪ್ಪಣೆ ಕೊಡಿಸಿದರಂತೆ. ಹೀಗೆ ಸಾರಿದಂತೆ ಅವರು ಲಿಂಗೈಕ್ಯರಾದ ಮೇಲೆ ಆಯಾ ಊರಿನ ಜನ ಹೀಗಿಯೇ ಪೂಜೆ ಮಾಡುತ್ತಿರುವದು ಕಂಡುಬರುತ್ತದೆ.

ಮರುಳಸಿದ್ಧರು ಮುಂದೆ ಜಮಾಲಿಶಾ ವಲೀಯನ್ನು ಕುರಿತು ಹೀಗೆ ಹೇಳುತ್ತಾರೆ. ನೀನು ದೇಹವನ್ನು ಬಿಡು. ನಿನ್ನ ಕುಲಗುರವಾದ ಮುಲ್ಲಾಸಾಹೇಬನಿಗೆ ದರ್ಶನ ಕೊಡು. ನೀನು ದೇಹಬಿಟ್ಟ ಮೇಲೆ ಮುಲ್ಲಾ ಮತ್ತು ಐದು ಜನರಿಗೆ ಭೇಟಿಯಾಗಿ ಗುಡ್ಡಕ್ಕೆ ನಾನೂ ಬರುತ್ತೇನೆ. ನೀನು ಅಲ್ಲಿಗೆ ಬಂದು ಬಿಡು ಜಮಾಲಿಶಾ ವಲೀ ಎಂದು ಆಜ್ಞಾಪಿಸಿದರು. ಅಲ್ಲಾ ಸಾಹೇಬರು ನಸುಕಿನ ಜಾವ ತನ್ನ ಗುಡಿಸಲಿನಲ್ಲಿ ಮಲಗಿದಾಗ ಅಲ್ಲಿಯೇ ದೇಹ ಬಿಟ್ಟು ಹೋಗಿದ್ದರು. ಭಕ್ತಾದಿಗಳು ದಿನಂಪ್ರತಿಯಂತೆ ಶರಣು ಶರಣರೀ ಸಾಹೇಬ್ರ ಎಂದು ಹೇಳುತ್ತಿದ್ದಂತೆ ಹೇಳಿದರು. ಅಂದು ಶರಣು ಶರಣು ಎಂದ ಪ್ರತಿಯಾಗಿ ಧ್ವನಿ ಬರಲೇ ಇಲ್ಲ. ಏನು ಕಾರಣ ಎಂದು ಯೋಚಿಸಿ ಗುಡಿಸಲಿನೊಳಗೆ ಬಂದು ನೋಡುತ್ತಾರೆ. ಜಮಾಲಿಶಾವಲೀ ಪೈಗಂಬರ ನಿಧನರಾಗಿದ್ದರು. ಆಗ ಡಂಬಳದ ಭಕ್ತರೆಲ್ಲ ಕೂಡಿಕೊಂಡು ಶ್ರೀಗಳ ಬಳಿಗೆ ಬಂದು, ಜಮಾಲಿಶಾ ವಲೀ ಹೋದರು ಎಂದು ತಿಳಿಸಿದರು. ಆಗ ಅವರು 'ಮುಲ್ಲಾನನ್ನು ಕರೆದುಕೊಂಡು ಬನ್ನಿರಿ' ಎಂದಾಗ ಮುಲ್ಲಾನನ್ನು ಕರೆದುಕೊಂಡು ಹೋದರು. 'ಜಮಾಲಿಶಾ ವಲೀ ದೇಹ ಬಿಟ್ಟಿದ್ದಾರೆ' ಎಂದು ಹೇಳಿದೊಡನೆ ಮುಲ್ಲಾ ಸಾಹೇಬರು ಸಿಟ್ಟಿಗೆ ಬಂದು "ಒಂದು ನಿಮಿಷವಾಗಿಲ್ಲ. ನನ್ನ ಜೊತೆ ನಮಾಜ ಮಾಡಿದ್ದು ಅದ್ಹೇಗೆ ದೇಹ ಬಿಡುತ್ತಾನೆ" ಎಂದು ರೇಗಿದ. ಅದಕ್ಕೆ ಭಕ್ತಾದಿಗಳು 'ನಾವು ಸುಳ್ಳು ಹೇಳುತ್ತಿಲ್ಲ ಅಪ್ಪನವರೇ ಕರೆಕಳಿಸಿದ್ದಾರೆ ಎಂದಾಗ ಆಶ್ಚರ್ಯದಿಂದ ಬಂದು ನೋಡುತ್ತಾರೆ. ಅವರು ದೇಹ ಬಿಟ್ಟಾಗಿತ್ತು. ಮುಂದೆ ಧರ್ಮದ ಪ್ರಕಾರ ಶವಕ್ಕೆ ಶೃಂಗಾರ ಮಾಡಿದ ಬಳಿಕ ಈ ಜಮಾಲಿಶಾ ವಲೀಯ ಗದ್ದುಗೆ ಶ್ರೀಮಠದ ಎಡಗಡೆಯೇ ಇರಬೇಕು ಎಂದು ಆಶೀರ್ವಾದ ಮಾಡಿ ಆ ಭೂಮಿಯನ್ನು ದಾನವಾಗಿ ನೀಡಿದರು. ಪ್ರತಿವರ್ಷ ಶ್ರೀಮಠದ ರಥೋತ್ಸವದ ಮಾರನೇ ದಿನವೇ ಆ ವಲೀಯ ಹೆಸರಿನಲ್ಲಿ ಉರುಸ್ ನಡೆಯಬೇಕು. ಆ ಉರಿಸಿಗೆ ಶ್ರೀಮಠದಿಂದ ಎಡೆ ಆಗಬೇಕು ಎಂದು ಸಂಪ್ರದಾಯ ಹಾಕಿದರು. ಅದಕ್ಕಾಗಿಯೇ ಶ್ರೀ ಸಿದ್ಧಲಿಂಗೇಶ್ವರ ಪರಂಪರೆಯ ಈ ಕರ್ತೃ ಗದ್ದುಗೆಯ ಮಠವು ಎಂದೆಂದಿಗೂ ಐಕ್ಯಮತ ಕೋಮು ಸೌಹಾರ್ಧತೆಯನ್ನು ತೋರಿಸುತ್ತಾ ಬಂದಿದೆ.

**ಕೆಂಚಮ್ಮ (ಡಂಬಳದ ಕೆರೆ) ದೇವಿಯ ಐತಿಹ್ಯ**

ಡಂಬಳದಲ್ಲಿರುವ ಈ ಕೆಂಚಮ್ಮ ದೇವಾಲಯವು ಆಧುನಿಕ ದೇವಾಲಯವಾಗಿದ್ದು ಇದರ ಕುರಿತಾದ ಐತಿಹ್ಯ ಹೀಗಿದೆ.

ಈಕೆ ಮದಗಮಾಸೂರ ಗ್ರಾಮದ ಮುತ್ತಿನ ವ್ಯಾಪಾರಸ್ಥರ ಮಗಳು. ಇವಳನ್ನು ಒಬ್ಬ ವ್ಯಾಪಾರಸ್ಥನಿಗೆ ಮದುವೆ ಮಾಡಿ ಕೊಟ್ಟಿದ್ದರು. ಮದಗಮಾಸೂರಿನ ಜನ ಬರಗಾಲ ಬಿದ್ದಾಗ ಊರಿನಲ್ಲಿ ಒಂದು ಕೆರೆ ಕಟ್ಟಿಸಬೇಕೆಂದು ನಿಶ್ಚಯಿಸಿದರು. ಅದರಂತೆ ಕೆರೆಯನ್ನು ಕಟ್ಟಿಸಿದರು. ಆದರೆ ಆ ಕೆರೆಗೆ ನೀರೇ ಬರಲಿಲ್ಲ. ಆಗ ಊರಿನ ಜ್ಯೋತಿಷಿಗಳನ್ನು ಕರೆಸಿ ಆ ಕೆರೆಗೆ ನೀರು ಏಕೆ ಬರುವುದಿಲ್ಲವೆಂದು ಕೇಳಿದರು. ಆಗ ಆ ಪುರೋಹಿತರು "ಈ ಊರಿನ ಪತಿವ್ರತೆ ಶಿರೋಮಣಿಯಾದ ಕೆಂಚಮ್ಮನನ್ನೂ ಕೆರೆಯಲ್ಲಿ ಬಿಟ್ಟರೆ ಮಾತ್ರ ನೀರು ತುಂಬುವದೆಂದು ಹೇಳಿದರು" ಊರಿನ ಜನರೆಲ್ಲರೂ ಕೂಡಿ ಕೆರೆಯ ಗರ್ಭದಲ್ಲಿ ಗುಡಿಯನ್ನು ಕಟ್ಟಿ ಅನ್ನ ಸಂತರ್ಪಣೆ ನೆರವೇರಿಸಿ ಕೆರೆಯ ದಡಕ್ಕೆ ಬಂದು ನಿಂತರು. ಊರ ಹಿರಿಯರೆಲ್ಲರೂ ಸೇರಿ "ತಾಯಿ ಕೆಂಚಮ್ಮ ಮುತ್ತಿನ ಆರತಿಯನ್ನು ಬಿಟ್ಟು ಬಂದಿರುವೆವು. ಅಲ್ಲಿ ಹೋಗು ತಾಯಿ, ಅದನ್ನು ತೆಗೆದುಕೊಂಡು ಬಾ" ಎಂದು ಹೇಳಿದರು. ಗುರು ಹಿರಿಯರ ಮಾತನ್ನು ಮೀರದೆ ಕೆಂಚಮ್ಮ ಗರ್ಭಗುಡಿ ಪ್ರವೇಶ ಮಾಡಿ ಆರತಿ ಎತ್ತಿಕೊಂಡು ಹೊರಟಳು. ಆಗ ಕ್ಷಣಾರ್ಧದಲ್ಲಿ ಎಲ್ಲೆಲ್ಲೂ ಮೋಡ ತುಂಬಿ ಭೋರ್ಗರೆಯುವಂತೆ ಮಳೆ ಸುರಿಯಿತು. ಆಗ ಕೆರೆಯು ತುಂಬಿ ತುಳುಕ ತೊಡಗಿತು. ನಂತರ ಕೆರೆಯ ಗರ್ಭಗುಡಿಯಲ್ಲಿಯೇ ಆಕೆ ವಾಸ ಮಾಡತೊಡಗಿದಳಂತೆ.

ಅದೇ ಊರಿನ ಹೆಣ್ಣೊಬ್ಬಳು ಚಿಂಚಲಿ ಮಾಯಮ್ಮನ ಕೃಪಾಶೀರ್ವಾದದಿಂದ ಒಂದು ಮಗುವಿಗೆ ಜನ್ಮ ನೀಡಿದಳು. ಆ ಮಗುವಿನ ಹೆಸರನ್ನು ಮಾಯಮ್ಮ ಎಂದೇ ಇಟ್ಟರು. ಆಕೆಗೆ ಬಸವಿ ಬಿಟ್ಟರು. ಆ ಬಸವಿಗೆ ಯಾರು ಹೆಣ್ಣು ಮಾಡುವರೋ ಅವರೇ ಎಂದು ಸಾರಿದರು. ಈ ಚೆಲುವೆಗೆ ಶ್ರೀಮಂತರು ಹೆಣ್ಣು ಮಾಡಿಕೊಳ್ಳಬೇಕೆಂದು ಬಯಸಿ ತುಂಬ ಹೆಣಗಿದ್ದರು. ಆದರೆ ಈ ಚೆಲುವೆ ಅವರನ್ನು ನಿರಾಕರಿಸಿದ ಜೋಪಡಿಯಲ್ಲಿ ವಾಸಿಸುವ ಬಡಹುಡುಗನನ್ನು ಮೋಹಿಸಿದಳು. ಈ ಮುಂಚೆ ಶ್ರೀಮಂತ ಪಡ್ಡೆ ಹುಡುಗರು ಈಕೆಗೆ ಹೆಣ್ಣು ಮಾಡಲು ಹೋಗಿ ತಮ್ಮ ತಮ್ಮಲ್ಲೆ ಹೊಡೆದಾಡಿದ್ದರಂತೆ. ಆದರೆ ಈಕೆ ಗುಡಿಸಲಿನಲ್ಲಿರುವ ಸಿದ್ದಪ್ಪನನ್ನು ವರಿಸಿದಳೆಂದು ಊರಿಗೆ ಸುದ್ದಿ ಹರಡುತ್ತಿದ್ದಂತೆ ಶ್ರೀಮಂತ ಹುಡುಗರು ಆ ಬಸವಿಯನ್ನು ಮತ್ತು ಬಯಸಿದ ಹುಡುಗನನ್ನು ಕೊಲೆಮಾಡಲು ಅಣಿಯಾದರು. ಅದೇ ಸಂದರ್ಭದಲ್ಲಿ ಮಾಯವ್ವ ಕೊಡ ಹಿಡಿದುಕೊಂಡು ನೀರಿಗೆ ಹೋದಳು. ನೀರು ತುಂಬುತ್ತಿರುವಾಗ ಹೆದರಬೇಡ ಮಗಳೆ, ನಾನು ಕೆಂಚಮ್ಮ ನೀನು ಈವತ್ತು ಇಲ್ಲಿದ್ದರೆ ನೀ ಬಯಸುವ ಯುವಕ ಮತ್ತು ನೀನು ಇಬ್ಬರೂ ಕೊಲೆಗೀಡಾಗುವಿರಿ. ಅದಕ್ಕೆ ನೀನು ಒಂದು ಮಣ್ಣಿನ ಬಿಂದಿಗೆ ನೀರು ಕೆರೆಯಿಂದ ತುಂಬಿಕೊಂಡು ಅದರ ಮೇಲೊಂದು ಕಾಯಿ

ಇಟ್ಟುಕೊಂಡು ಕೆಂಚಮ್ಮ ತಾಯಿಯೇ ಎಂದು ನೆನೆ. ನಾನು ಅದರಲ್ಲಿ ನಿನ್ನ ಜೊತೆ ಬರುತ್ತೇನೆ. ಕೊಡ ಎಲ್ಲಿ ಭಾರವಾಗುತ್ತೋ ಆ ಮಾರ್ಗ ಬಿಡು. ಎಲ್ಲಿ ಹಗುರವಾಗುತ್ತೋ ಆ ಮಾರ್ಗವಾಗಿ ನಡೆ ಹೀಗೆ ಆ ಮಾರ್ಗ ಈ ಮಾರ್ಗ ಹಿಡಿದು ಪಯಣಿಸುತ್ತ ಹೊಸ ಡಂಬಳ ಮಾರ್ಗವಾಗಿ ಕೆರೆಯ ಹತ್ತಿರ ಬಂದು ನಿಲ್ಲು. ಆ ನಿಂತ ಜಾಗದಲ್ಲಿ ಎರಡು ಮದಗಗಳಿವೆ. ಹಳೆಯ ಮದಗದ ಹತ್ತಿರ ಕೊಡವನ್ನು ಇಳಿಸಿ ಪೂಜಿಸು" ಎಂದಳು. ಅಲ್ಲಿ ಒಂದು ಗುರುತು ಇಟ್ಟು ನಂತರ ಕೊಡ ಎತ್ತಿ ನೋಡಿದಳು. ಕೊಡ ಹಗುರವಾಗಿತ್ತು. ಆ ಮಾರ್ಗವಾಗಿ ನಡೆಯುತ್ತಾ ಬಂದಳು. ಆ ಮಾಯಮ್ಮ ಬರುತ್ತಿರುವದನ್ನು ನೋಡಿದ ಕೇರಿಯ ಜನರು ಡೋಲುಬಾಜಿಗಳನ್ನು ಬಾರಿಸುತ್ತ ಕೇರಿಗೆ ಬರಮಾಡಿಕೊಂಡು ಅಲ್ಲೇ ಮೂರ್ತಿ ಮಾಡಿದರು. ಊರಿನ ಜನರೆಲ್ಲ.

"ಮದಗ ಮಾಸೂರದಿಂದ
ಬಂದಳೋ ಕೆಂಚಮ್ಮ
ಬಂದಳೋ ಕೆಂಚಮ್ಮ ಮಾಯಮ್ಮನ ಕೊಡ
ಬಂದು ಡಂಬಳದ ಕೆರೆಯಲ್ಲಿ
ಹಳೆಮದಗದಲ್ಲಿ ಮೂರ್ತ ಆದಳೊ".

ಹೀಗೆ ಹಾಡಿ ಹಾಡಿ ಒಂದು ಕಟ್ಟೆಯನ್ನು ಕಟ್ಟಿದರು. ಕಟ್ಟೆಯ ಮೇಲೆ ಕೊಡ ಇಟ್ಟರು. ನಂತರ ಕೆಂಚಮ್ಮ ಎಂದು ಕರೆಯತೊಡಗಿದರು. ಕ್ರಮೇಣ ಆಕೆಯ ಹೆಸರಿಗೊಂದು ಗುಡಿ ಕಟ್ಟಿದರು. ನಂತರ ಮಾಯಮ್ಮ ಲಿಂಗೈಕ್ಯಳಾದಳು. ಕೆಂಚಮ್ಮನ ಪಕ್ಕದಲ್ಲೇ ಒಂದು ಮೂರ್ತಿಯನ್ನು ಸ್ಥಾಪಿಸಿದರು. ಈಗಲೂ ಪಲ್ಲಕ್ಕಿ ಗದ್ದಿಗೆ ಮೇಲೆ ಮಾಯಮ್ಮ ಕೆಂಚಮ್ಮ ಎಂಬ ಹೆಸರಿನ ದೇವರುಗಳಿದ್ದಾರೆ.

**ಕೆರೆಕೊಡಿ ಬಸವೇಶ್ವರ ದೇವಾಲಯದ ಐತಿಹ್ಯ**

ಮುಂಡರಗಿ ತಾಲೂಕಿನ ಶಿರೂರು ಗ್ರಾಮದಲ್ಲಿ ಈ ದೇವಾಲಯವು ಕಂಡುಬರುತ್ತವೆ. ಶಿರೂರು ಗ್ರಾಮದ ಬಸಪ್ಪ ಕವಲೂರು ಅವರ ಮನೆಯ ಒಂದು ಜೊತೆ ಎತ್ತುಗಳು ಪೂರ್ವಭಾಗದಲ್ಲಿದ್ದ ಕೆರೆಯಲ್ಲಿ ನೀರನ್ನು ಕುಡಿಸಲಿಕ್ಕೆ ಎಂದು ಕರೆದುಕೊಂಡು ಹೋಗಿದ್ದಾಗ, ಆ ಎತ್ತುಗಳು ಕೊಸರಿಕೊಂಡು ಹೋಗಿ ನೀರಿನಲ್ಲಿ ಮುಳುಗಿ ಅಲ್ಲಿಯೇ ಕಲ್ಲಾಗಿದ್ದರಿಂದ ಆ ದೇವಸ್ಥಾನಕ್ಕೆ ಕೆರೆಕೊಡೆ ಬಸವೇಶ್ವರ ಎಂದು ಹೆಸರು ಬಂದಿತು. ಆ ಎತ್ತುಗಳೇ ಇಂದು ದೇವರ ಪ್ರತೀಕಗಳಾಗಿವೆ ಎಂಬುದಕ್ಕೆ ಅಲ್ಲಿ ಉದ್ಭವವಾದ ಶಿವಲಿಂಗವೇ ಸಾಕ್ಷಿ ಎಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಈ ದೇವಸ್ಥಾನವೇ ಇಂದು ಅಲ್ಲಿ ಗ್ರಾಮದ ದೇವಸ್ಥಾನವಾಗಿದೆ.

**ಅಶ್ವತ್ಥಗಿಡದ ಐತಿಹ್ಯ**

ಬಿದರಳ್ಳಿಯ ಅಶ್ವತ್ಥನಾರಾಯಣ ದೇವಾಲಯದ ಪಕ್ಕದಲ್ಲಿರುವ ಅಶ್ವತ್ಥಗಿಡವು ವಿಶಿಷ್ಟತೆಯಿಂದ

ಕೂಡಿದೆ. ಈ ವೃಕ್ಷದಮೂಲದಲ್ಲಿ ಬ್ರಹ್ಮ, ಮಧ್ಯದಲ್ಲಿ ವಿಷ್ಣು, ಮೇಲೆ ಶಂಕರನು ಸನ್ನಿಹಿತನಾಗಿದ್ದಾನೆಂದೂ ಇದರ ಪ್ರದಕ್ಷಿಣೆ ಮಾಡಿದಲ್ಲಿ ಸರ್ವರೋಗಗಳು ಪರಿಹಾರವಾಗುತ್ತವೆ ಎಂಬ ನಂಬುಗೆ ಸ್ಥಳೀಯ ಜನರಲ್ಲಿದೆ.

**೪.೩. ಸ್ಥಳಾಧಾರಿತ ಐತಿಹ್ಯಗಳು**

ಸ್ಥಳನಾಮಗಳು ಮತ್ತು ಸ್ಥಳ ಐತಿಹ್ಯಗಳಿಗೆ ಸಂಬಂಧಿಸಿದಂತೆ ಅದರ ವಿಶಿಷ್ಟತೆಯನ್ನು ಕುರಿತಂತೆ ನಿರೂಪಿತವಾಗುವ ಐತಿಹ್ಯಗಳೇ ಸ್ಥಳೀಯ ಐತಿಹ್ಯಗಳು. ಸ್ಥಳದ ವಿಶಿಷ್ಟತೆ ಆಕರ್ಷಕವಾಗಿ ಮನಮುಟ್ಟುವಂತೆ ವರ್ಣಿತವಾಗುವದು ಇಂತಹ ಐತಿಹ್ಯಗಳ ವೈಶಿಷ್ಟ್ಯ. ಅದರಲ್ಲಿ ಊರ ಹೆಸರುಗಳು, ಕೆರೆ, ಕೋಟೆ, ಭಾವಿ, ಹೀಗೆ ವ್ಯಕ್ತಿ ನಿರ್ಮಿಸಿಕೊಂಡ ಭೌಗೋಳಿಕ ನೆಲೆಯ ಪರಿವರ್ತನೆ ಅಥವಾ ಮಾರ್ಪಾಟಿನ ಪ್ರಯತ್ನಗಳ ಆಯಾಮಗಳನ್ನು ಈ ಸ್ಥಳೀಯ ಐತಿಹ್ಯಗಳು ಒಳಗೊಂಡಿರುತ್ತದೆ. ಸಾಮಾನ್ಯವಾಗಿ ಇವುಗಳು ಘಟನಾ ಪ್ರಧಾನವಾದ ನಿರೂಪಣೆಗಳಾಗಿರುತ್ತವೆ. ಪ್ರಾದೇಶಿಕವಾಗಿ ಒಂದು ಸ್ಥಳದ ಪ್ರಾಕೃತಿಕ ವೈಶಿಷ್ಟ್ಯವು ಐತಿಹ್ಯ ಸೃಷ್ಠಿಗೆ ಕಾರಣವಾಗಿರಬಹುದು. ಊರು ನಿರ್ಮಾಣವಾಗಿದ್ದುದು, ಊರಿಗೆ ಹೆಸರು ಬಂದದ್ದು, ವ್ಯವಸಾಯ, ಪಶುಪಾಲನೆ ಮತ್ತಿತರ ಉದ್ದೇಶಗಳಿಗೆಂದು ಭೂಮಿಯನ್ನು ಸಾಗುವಳಿ ಇಲ್ಲವೆ ಹಸನು ಮಾಡಿಕೊಂಡಿದ್ದು, ಕೆರೆ, ಕಟ್ಟೆ, ಬಾವಿಗಳನ್ನು ತೋಡಿದ್ದು, ಗ್ರಾಮದಿಂದ ಮುಂದುವರೆದು ಪಟ್ಟಣ, ನಗರ, ರಾಜ್ಯ, ಸಾಮ್ರಾಜ್ಯಗಳು ತಲೆ ಎತ್ತಿದ್ದು, ವೈಭವವಾಗಿ ಮೆರೆದದ್ದು, ಪತನಗೊಂಡಿದ್ದು ಮತ್ತೆ ಯಾವುದೇ ಒಂದು ಸ್ಥಿತಿಗೆ ಹೊಂದಾಣಿಕಯಾದದ್ದು ಎಲ್ಲವೂ ಸೇರುತ್ತವೆ.

ಹೀಗೆ ಸ್ಥಳೀಯ ಹಿನ್ನಲೆಯಲ್ಲಿ ನಿರ್ಮಾಣಗೊಂಡು ಬೆಳವಣಿಗೆಯ ಹಂತಗಳಲ್ಲಿ ಮರೆಯಾದ್ದರ ನೆನಪುಗಳನ್ನು ಉಳಿಸಿಕೊಂಡು ಬಂದ ಕುರುಹುಗಳು ಸ್ಥಳಗಳಿಗೆ ಸಂಬಂಧಿಸಿದ ಐತಿಹ್ಯಗಳಲ್ಲಿ ಸಿಗುತ್ತವೆ. ಇವು ಹೀಗೇಕೆ ಎಂಬ ಕುತೂಹಲ ತಾಳುವಾಗ ಇಲ್ಲವೇ ಪ್ರಶ್ನೆ ಉದ್ಭವಿಸುವಾಗ ಅವುಗಳಿಗೆ ಉತ್ತರ ರೂಪದಲ್ಲಿ ಕಂಡುಕೊಂಡ ರಚನೆಗಳಿವು. ಹಾಗೆ ಉತ್ತರಿಸಲು ಪ್ರಯತ್ನಿಸುವಾಗ ಜನಪದರು ತಮ್ಮ ಸ್ವಅನುಭವಗಳನ್ನೋ ಲೋಕಾನುಭವಗಳನ್ನೋ ಆಧರಿಸಿರುತ್ತಾರೆ. ಇವು ಈ ಹಿಂದೆ ನಡೆದಿರಬಹುದಾದ ಚಾರಿತ್ರಿಕ ಘಟನೆಯನ್ನಾಗಲಿ ನಡೆದಿವೆ ಎಂದು ನಂಬುವ ಪೌರಾಣಿಕ ಅಂಶಗಳನ್ನಾಗಲಿ ನೆನಪಿನಲ್ಲಿಡುವಂತಹುಗಳಾಗಿರುತ್ತವೆ.

ಸ್ಥಳೀಯವಾಗಿ ಸಾಮಾಜಿಕ ಬದುಕಿನ ಮೇಲಾದ ಆರ್ಥಿಕ, ಧಾರ್ಮಿಕ, ಚಾರಿತ್ರಿಕ ಅಭಿವೃದ್ಧಿಗಳು ಇಲ್ಲವೇ ಅಧಃಪತನಗಳಿಗೆ ಸಂಬಂಧಿಸಿದ ಸುಳಿವುಗಳು ಸ್ಥಳ ಸಂಬಂಧಿ ಐತಿಹ್ಯಗಳಲ್ಲಿ ಲಭಿಸುತ್ತವೆ. ಅಷ್ಟೇ ಅಲ್ಲದೇ ವ್ಯಾಪಾರಸ್ಥರು, ಶ್ರೀಮಂತರು ಪುಣ್ಯ ಲಭಿಸಲೆಂಬ ಕಾರಣಕ್ಕಾಗಿ ಕೆರೆಭಾವಿಗಳನ್ನು ತೋಡಿಸಿದ ಐತಿಹ್ಯಗಳಿವೆ. ಪಾಪಪ್ರಜ್ಞೆಗೆ ಸಂಬಂಧಿಸಿದ ಆತ್ಮಸಾಕ್ಷಿಯ ಸಾಕ್ಷಾತ್ಕಾರವನ್ನು ಇಂಥ ನಿರ್ಮಾಣಗಳ ಹಿನ್ನಲೆಯಲ್ಲಿ ಕಾಣಬಹುದು. ಅಲ್ಲದೇ ಹಲವು ಮಾದರಿಯ ಚಾರಿತ್ರಿಕ ಕುರುಹುಗಳು

ಅಂದಂದಿನ ಮೌಲ್ಯಗಳ ಮಾನದಂಡಗಳು ಸ್ಥಳಸಂಬಂಧಿ ಐತಿಹ್ಯಗಳಲ್ಲಿ ಕಂಡುಬರುತ್ತವೆ. ಇದಕ್ಕೆ ಧಾರ್ಮಿಕ ಕಾರಣಗಳೂ ಇರಬಹುದು ಕೆಲವೊಮ್ಮೆ ಪುರಾಣಲೇಪನವನ್ನು ಪಡೆಯುತ್ತವೆ.

ಈ ಪರಿಸರದಲ್ಲಿಯು ಸಹ ಈ ರೀತಿಯ ಅನೇಕ ವಿಶಿಷ್ಟತೆಯನ್ನು ಹೊಂದಿರುವ ಹಲವು ಗ್ರಾಮಗಳು ಕಂಡುಬರುತ್ತವೆ. ಅವುಗಳಲ್ಲಿ ಮುಖ್ಯವಾಗಿ ಕಪ್ಪತ್ತಗುಡ್ಡ, ವಿಠಲಾಪುರ, ಡಂಬಳ, ಕೊರ್ಲಹಳ್ಳಿ, ಬಿದರಳ್ಳಿ, ಮುಕ್ಕುಂಪುರ, ಕಲಕೇರಿ ಮುಂತಾದವುಗಳು ಇಲ್ಲಿ ಪ್ರಮುಖವಾಗಿವೆ.

**ಕಪ್ಪತ್ತಗುಡ್ಡ**

ಮುಂಡರಗಿ ಪರಿಸರದಲ್ಲಿರುವ ಕಪ್ಪತ್ತಗುಡ್ಡವು ವಿಶೇಷತೆಯನ್ನು ಪಡೆದಿದೆ. ಕಪ್ಪತ್ತ ಗುಡ್ಡದ ಬಗೆಗಿನ ಐತಿಹ್ಯ ಬಹುಮುಖ್ಯವಾಗಿದೆ.

ಒಮ್ಮೆ ನೈಮಿಷಾರಣ್ಯದಲ್ಲಿ ಶಾನಕಾದಿ ಋಷಿಗಳು ಸೂತರಿಗೆ ಶ್ರೇಷ್ಠವಾದ ವಿಷ್ಣು ಹಾಗೂ ಮಹೇಶ್ವರರ ಚರಿತ್ರೆ (ವೃಷಾಕಪಿ)ಯನ್ನು ಹೇಳಬೇಕೆಂದು ಕೇಳಿಕೊಂಡರು. ತುಂಗಭದ್ರೆಯ ಉತ್ತರಕ್ಕೆ, ಕೃಷ್ಣವೇಣಿಯ ದಕ್ಷಿಣಕ್ಕೆ, ಪಂಪಾ ಸರೋವರದ ಪಶ್ಚಿಮಕ್ಕೆ ಸಹ್ಯಪರ್ವತದ ಪೂರ್ವಕ್ಕೆ ಇರುವ ಕಪೋತ ಪರ್ವತ (ಕಪ್ಪತ್ತಗುಡ್ಡ)ದಲ್ಲಿ ಸಾಧುಗಳು, ಸಿದ್ಧರು ಸಿದ್ಧಿಯನ್ನು ಹೊಂದುತ್ತಾರೆ. ಈ ಪರ್ವತಕ್ಕೆ ಕಪೋತಪರ್ವತ ಎಂದು ಏಕೆ ಕರೆಯುತ್ತಾರೆ ಎಂದು ಋಷಿಗಳು ಪ್ರಶ್ನಿಸಲು ಆಗ ಸೂತರು ಆ ಋಷಿಗಳಿಗೆ ಶಿಬಿ ಚಕ್ರವರ್ತಿ ಮತ್ತು ಕಪೋತದ ಕಥೆಯನ್ನು ವಿವರಿಸಿದರು. ಹೀಗೆ ಲೋಹಖಂಡಪುರ ಲಕ್ಷಕುಂಡಲಿ, ಲೊಕ್ಕಿಗುಂಡಿ ಎಂದು ಪುರಾಣಪ್ರಸಿದ್ಧವೂ ಇತಿಹಾಸ ಪ್ರಸಿದ್ಧವೂ ಆದ ಇಂದಿನ ಲಕ್ಕುಂಡಿಯನ್ನಾಳುತ್ತಿದ್ದ ಶಿಬಿ ಚಕ್ರವರ್ತಿ ಕಥೆ ಇಲ್ಲಿದೆ.

ನ್ಯಾಯ ಪರಿಪಾಲನೆಗೆ ಮತ್ತೊಂದು ಹೆಸರಾಗಿದ್ದ ಶಿಬಿಯನ್ನು ಪರೀಕ್ಷಿಸಲು ದೇವತೆಗಳು ಇಂದ್ರ ಹಾಗೂ ಅಗ್ನಿಯನ್ನು ನಿಯಮಿಸಿದರಂತೆ. ಇಂದ್ರನು ಕಪೋತ (ಪಾರವಾಳ) ರೂಪ ಧರಿಸಿ ಅಗ್ನಿ ಗಿಡುಗನ ರೂಪ ಧರಿಸಿದರು. ಕಪೋತವನ್ನು ಬೆನ್ನಟ್ಟಿಬಂದ ಗಿಡುಗ ಶಿಬಿ ಚಕ್ರವರ್ತಿಯ ಮುಂದೆ ಬಂದಾಗ ಕಪೋತವು ಶಿಬಿಗೆ ಶರಣಾಗಿ ತನ್ನ ಪ್ರಾಣರಕ್ಷಣೆ ಮಾಡಲು ಪ್ರಾರ್ಥಿಸಿರಂತೆ. ಆಗ ಶಿಬಿರಾಜ ಗಿಡುಗಕ್ಕೆ ಕಪೋತವನ್ನು ಬಿಡು ಎಂದು ಕೇಳಿದಾಗ ಅದು ನನ್ನ ಬೇಟೆ, ನನ್ನ ಆಹಾರ, ಅದನ್ನು ಬಿಟ್ಟರೆ ಹಸಿವಿನಿಂದ ನಾನು ಸಾಯುವೆ ಎನ್ನಲು ಶಿಬಿರಾಜನು ಕಪೋತವು ನನಗೆ ಶರಣು ಬಂದಿದೆ. ಶರಣು ಬಂದವರನ್ನು ರಕ್ಷಿಸುವುದು ನನ್ನ ಧರ್ಮ ಅದನ್ನು ಬಿಟ್ಟು ಏನನ್ನಾದರೂ ಕೇಳು ಕೊಟ್ಟೇನು ಎಂದನು.

ಆಗ ಆ ಗಿಡುಗವು ಪಾರಿವಾಳದಷ್ಟೇ ಮೃದುವಾದ ಮಾಂಸ ನಿನ್ನ ತೊಡೆಯಲ್ಲಿದೆ ಕೊಡು ಎನ್ನಲು ಅವನು ಸಂತಸದಿಂದ ಒಪ್ಪಿಕೊಂಡು ತಕ್ಕಡಿಯನ್ನು ತರಿಸಿ ಒಂದು ಪರಡಿಯಲ್ಲಿ ಕಪೋತವನ್ನು ಇನ್ನೊಂದು ಪರಡಿಯಲ್ಲಿ ತನ್ನ ತೊಡೆಯನ್ನು ಕೊಯ್ದು ಮಾಂಸ ಹಾಕುತ್ತ ಹೋದರೂ ಪರಡಿಗಳ ಸಮಸ್ಥಿತಿಗೆ ಬರದೇ ಹೋದವು. ಕೊನೆಗೆ ಶಿಬಿ ಅರೆಜೀವನವಾದರೂ

ಕಪೋತವನ್ನು ಬಿಡದೆ ತನ್ನ ಜೀವವನ್ನು ಕೊಡಲು ಮುಂದಾದಾಗ ಅವನ ನ್ಯಾಯಪರಿಪಾಲನೆಯನ್ನು ಹೊಗಳಿ ಮತ್ತು ಶಿಬಿಯನ್ನು ಮೊದಲಿನಂತೆ ಮಾಡಿ ಬೇಕಾದ ಎರಡು ವರಗಳನ್ನು ಬೇಡಿಕೊಳ್ಳಲು ತಿಳಿಸಿದರು. ಅದಕ್ಕೆ ಶಿಬಿ ಚಕ್ರವರ್ತಿ ಆ ದೇವತೆಗಳಿಗೆ ಕೈಮುಗಿದು ನನ್ನ ಬುದ್ಧಿ, ಮನ, ಆತ್ಮ ಯಾವಾಗಲೂ ಧರ್ಮ, ನ್ಯಾಯ ಪರಿಪಾಲನೆಯಲ್ಲಿ ಅನುರಕ್ತವಾಗಲಿ ಎಂದು ಕೇಳಿದನು. ಅದಕ್ಕೆ ಆ ದೇವತೆಗಳು ತಥಾಸ್ತು ಎಂದರು. ಕೊನೆಗೆ ಶಿಬಿ ಚಕ್ರವರ್ತಿ ಆ ಗುಡ್ಡದಲ್ಲಿ ತಪಸ್ಸು ಮಾಡಿ ಸಿದ್ಧಿಪಡೆದಿದ್ದರಿಂದ ಇದಕ್ಕೆ ಕಾರಣವಾದ ಕಪೋತದ ಮೂಲಕ ಆ ಪರ್ವತಕ್ಕೆ ಕಪೋತಗಿರಿ ಎಂಬ ಹೆಸರು ಬಂದಿತೆಂದು ಭವಿಷೋತ್ತರ ಪುರಾಣದ ಕ್ರತುಪುರ ಮಹಾತ್ಮೆಯ ಮುಖಾಂತರ ತಿಳಿದುಬರುತ್ತದೆ.

**ಪೇಠಾ-ಆಲೂರು**

ಮುಂಡರಗಿ ತಾಲೂಕಿನಲ್ಲಿರುವ ಪೇಠಾ ಆಲೂರು ಬಹಳ ಪುರಾತನ ಗ್ರಾಮ. ಈ ಗ್ರಾಮಕ್ಕೆ ಸುಮಾರು ಒಂದು ಸಾವಿರ ವರ್ಷದ ಇತಿಹಾಸವಿದೆ. ಪೂರ್ವಕಾಲದಲ್ಲಿ ಪೇಠಾ ಆಲೂರನ್ನು ಮಾಳದಾಲೂರು ಎಂದು ಕರೆಯಲಾಗುತ್ತಿತ್ತು. ಇದಕ್ಕೆ ಕಾರಣ ಇಷ್ಟೇ. ಈ ಗ್ರಾಮದ ಪಶ್ಚಿಮಕ್ಕೆ ಹರಿಯುವ ಹಳ್ಳದ ನೀರು ಉಪ್ಪಾಗಿದ್ದು ಆಗ ಈ ಗ್ರಾಮದಲ್ಲಿ ಆ ನೀರಿನಿಂದ ಉಪ್ಪನ್ನು ತಯಾರಿಸುತ್ತಿದ್ದರು ಎಂದು ಹೇಳಲಾಗಿದೆ. ಆದ್ದರಿಂದ ಈ ಗ್ರಾಮದಲ್ಲಿ ಆಗ ಉಪ್ಪಿನ ಮಳಿಗೆಗಳು ಇದ್ದವೆಂದು ಮತ್ತು ಈ ಕಾರಣದಿಂದ ಈ ಗ್ರಾಮಕ್ಕೆ 'ಮಾಳದಾಲೂರು' ಎಂದು ಕರೆಯಲಾಯಿತೆಂದು ತಿಳಿಯಲಾಗಿದೆ.

**ಮುಂಡರಗಿ**

ಅಧ್ಯಯನದ ಕೇಂದ್ರಸ್ಥಳವಾದ ಮುಂಡರಗಿಯು ಸ್ಥಳದ ಐತಿಹ್ಯ ಕುರಿತಾಗಿಯು ವಿಭಿನ್ನ ಅಭಿಪ್ರಾಯಗಳಿವೆ. ಮುಂಡರಗಿಯ ಮೂಲ 'ಮೃಡಗಿರಿ'ಯಾಗಿರಬೇಕೆಂದು ಅದಕ್ಕೆ ಮುಂಡರಗಿಯ ಗುಡ್ಡದಲ್ಲಿರುವ ಮೃಡನ ಅಥವಾ ಶಿವನ ದೇವಾಲಯವೇ ಆಧಾರವಾಗಿದೆ. ಈ ಮೃಡಗಿರಿಯು ಮುಂದೆ ಮುಂಡರಗಿ ನಿಸರ್ಗವಾಚಿ ನಾಮಕ್ಕಿಂತಲೂ ಜನಾಂಗವಾಚಿ ನಾಮಕ್ಕೆ ತೀರಾ ಹತ್ತಿರದ ಹೆಸರು. ಹಾಗಾಗಿ ಜನಪದರು ಹೇಳುವ ಪ್ರಕಾರ ಮುಂಡರಗಿ ಬೋಳಾದ ಗುಡ್ಡದಿಂದ ಮುಂಡರಗಿ ಎಂಬ ಹೆಸರಿದ್ದುದು ಬರುಬರುತ್ತ ಮುಂಡರಗಿ ಹೋಗಿ ಮುಂಡರಗಿಯಾಗಿರಬಹುದೆಂದು ಮತ್ತೊಂದು ಅಭಿಪ್ರಾಯವಾಗಿದೆ.

ಆದರೆ ಗ್ರಾಮನಾಮಶಾಸ್ತ್ರಜ್ಞರ ಅಭಿಮತದಂತೆ ಮುಂಡರಗಿ ಇದು ಜನಾಂಗವಾಚಿಯಾಗಿದ್ದು 'ಮುಂಡ'ರೆಂಬ ಮೂಲನಿವಾಸಿಗಳಿಂದ ಈ ಹೆಸರು ಬಂದಿರಬೇಕೆಂದು ಹೇಳುತ್ತಾರೆ. ಇಲ್ಲಿ 'ಮುಂಡರು' ಎಂಬ ರೂಪಕ್ಕೆ 'ಗಿ' ಕಾರ ಸೇರಿ 'ಮುಂಡರಗಿ' ಎಂದು ರೂಢಿಯಲ್ಲಿ ಬಂದಿದೆ. ಮುಂಡ+ರ+ಕೈ, ಮುಂಡರ+ಗೈ>ಮುಂಡರಗೈ>ಮುಂಡರಗಿ ಎಂದು ಉಂಟಾಗಿದೆ ಎಂದು ತಿಳಿದುಬರುತ್ತದೆ.

### ವಿಠಲಾಪುರ

ಮುಂಡರಗಿ ತಾಲೂಕಿನ ಒಂದು ಚಿಕ್ಕಗ್ರಾಮ ವಿಠಲಾಪುರ. ಈ ವಿಠಲಾಪುರದ ಕೋಟೆಯೊಳಗೆ 'ಮಹಾಪುರುಷ'ರ ಮನೆತನವಿದ್ದು ಈ ಮನೆತನದಲ್ಲಿ ಬಿಷ್ಟಪ್ಪಯ್ಯ ಎಂಬ ಮಹಾಪುರುಷರು ಪ್ರಮುಖರಾಗಿದ್ದಾರೆ. ಇವರು ಹಂಪಿಯಲ್ಲಿರುವ ಶ್ರೀವಿರುಪಾಕ್ಷದೇವರ ಗುಡಿಯ ಮುಂದಿರುವ ಹನ್ನೊಂದು ಅಂತಸ್ತಿನ ಗೋಪುರವನ್ನು ಕಟ್ಟಿದ ಮಹಾಪುರುಷರಿವರು. ಪವಾಡ ಪುರುಷರಾಗಿ ಮೆರೆದ ಈ ಬಿಷ್ಟಪ್ಪಯ್ಯನವರು ಮಹಾಪುರುಷರಾಗಿದ್ದರಿಂದ ಈ ಮನೆತನಕ್ಕೆ ಇಂದಿಗೂ ಮಹಾಪುರುಷರೆಂದೇ ಕರೆಯುತ್ತಾರೆ. ಇವರ ಮನೆತನದವರು ಪೂಜಿಸುವ ವಿಠ್ಠಲ ದೇವಾಲಯವು ಅಲ್ಲಿಯೇ ಇದ್ದು ವಿಠಲನು ಅಲ್ಲಿ ನೆಲೆಸಿದುದರಿಂದ ಇದನ್ನು ವಿಠಲಾಪುರವೆಂದು ಕರೆಯಲಾಗಿದೆ. ದೇವಾಂಶಸಂಭೂತರೆಂದು ಪರಿಗಣಿಸಲ್ಪಟ್ಟ ಭಿಷ್ಟಪ್ಪಯ್ಯನವರ ವಿಗ್ರಹ ಹಾಗೂ ಪಂಚಲೋಹದ ಅತ್ಯಂತ ಸುಂದರವಾದ ರಸಲಿಂಗವು ಕೂಡ ವಿಠಲನೊಂದಿಗೆ ಪೂಜೆಗೊಳ್ಳುತ್ತಾ ಬಂದಿದೆ.

### ಬಿದರಳ್ಳಿ

ಮುಂಡರಗಿ ತಾಲೂಕಿನ ಈ ಗ್ರಾಮವನ್ನು ಹಿಂದೆ ಬಿರ್ದುವಳ್ಳಿ ಎಂದು ಕರೆಯುತ್ತಿದ್ದರು. ಈ ಗ್ರಾಮವನ್ನು ಸ್ಕಂದಪುರಾಣದಲ್ಲಿ ವೇಣುಪುರಿ ಎಂದು ಕರೆಯಲಾಗಿದೆ. ಇದು ತುಂಗಭದ್ರಾ ನದಿಯ ದಂಡೆಯಲ್ಲಿದ್ದು, ಶೈವ, ವೈಷ್ಣವ ಧರ್ಮಗಳ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ರೇಣುಕೆ ಪಾತಾಳದಲ್ಲಿರುವಾಗ ಅವಳನ್ನು ಕಾಣುವ ಅಪೇಕ್ಷೆಯಿಂದ ಪರಶುರಾಮ ಸ್ಮರಣೆ ಮಾಡಲು ನದಿತೀರದ ಬಿದಿರುಪಳೆಯಿಂದ ಅವಿರ್ಭವಿಸಿ ಬಂದಿದ್ದರಿಂದ ಈ ಊರಿಗೆ ಬಿದರಳ್ಳೆಮ್ಮ ಎಂದು ಹೆಸರು ಬಂದಿತು. ಮುಂದೆ ಈ ಊರು ವೇಣುಪುರಿ, ಬಿದರಳ್ಳಿ ಎಂಬ ಹೆಸರುಗಳಿಂದ ಪ್ರಸಿದ್ಧಿ ಹೊಂದಿತೆಂದು ಪೌರಾಣಿಕ ಕಥೆಯಿಂದ ತಿಳಿದುಬರುವುದು.

### ತಾಮ್ರಗುಂಡಿ

ಮುಂಡರಗಿ ತಾಲೂಕಿನ ಈ ಗ್ರಾಮವು ಬರದೂರಿನಿಂದ ೨.ಕಿ.ಮೀ. ದೂರದಲ್ಲಿದೆ. ಪ್ರಾಚೀನ ಕಾಲದಿಂದಲೂ ದೊಡ್ಡ ಗ್ರಾಮವೆಂದು ಇದು ಹೆಸರುಪಡೆದಿದೆ. ಇಂಥ ಊರಿನಲ್ಲಿ ಒಬ್ಬ ಭಕ್ತನು ಅಥವಾ ಶರಣನು ಇದ್ದನಂತೆ. ಈ ಭಾಗದಲ್ಲಿ ಹೆಸರುವಾಸಿಯಾಗಿರುವ ಮಹಾತಪಸ್ವಿಗಳಾದ, ಸ್ವಾಮಿಗಳಾದ ನಂದಿವರಿ ಸ್ವಾಮಿಗಳು ಪ್ರತಿವರ್ಷ ಈ ಗ್ರಾಮಕ್ಕೆ ಭೇಟಿ ಸೀಡುತ್ತಿದ್ದರಂತೆ. ಹೀಗೆ ಒಮ್ಮೆ ಅವರು ಈ ಗ್ರಾಮದ ಭೇಟಿಗಾಗಿ ಬಂದಂತಹ ಸಂದರ್ಭದಲ್ಲಿ ಒಂದು ವಿಶೇಷ ಘಟನೆ ನಡೆಯುತ್ತದೆ. ಅದೇನೆಂದರೆ ಸ್ವಾಮಿಗಳಿಗೆ ಎದುರಾಗಿಯೇ ಗೋಡೆಯನ್ನು ಕಟ್ಟುವ ವಡ್ಡ (ಗೌಂಡಿ) ಗರ್ವದಿಂದ ಎದೆಯುಬ್ಬಿಸಿ ನಡೆದು ಹೋದನಂತೆ. ಇದರಿಂದ ಕೋಪಗೊಂಡ ಸ್ವಾಮಿಗಳು ತಾಮ್ರಗುಂಡಿಯಾಗಿದ್ದ ಈ ಊರು ಬಂಗಾರಗಿಂಡಿಯಾಗಿತ್ತು. ಆದ್ರೆ ಈಗ ಇದು ಬಂಗಾರಗಿಂಡಿ ಹೋಗಿ ತಿಪ್ಪೆಗುಂಡಿಯಾಗಲಿ ಎಂದು ಶಪಿಸಿದರಂತೆ. ಎರಡು ಕಲ್ಮೇಶ್ವರ ಗುಡಿ ಪರಿಸರದಲ್ಲಿರುವ ತಾಮ್ರಗುಂಡಿಯು ಇಂದು 'ಆಳಊರು' ಎಂದು ಕರೆಯಿಸಿಕೊಳ್ಳುತ್ತಲಿದೆ.

### ಡೋಣಿ

ಕಪ್ಪತ್ತಗಿರಿಯ ಅಂಚಿನಲ್ಲಿರುವ ಡೋಣಿಯು ಮುಂಡರಗಿ ತಾಲೂಕಿನ ಚಿಕ್ಕಗ್ರಾಮ. ಪ್ರಾಚೀನ ಶಾಸನಗಳಲ್ಲಿ ಗ್ರಾಮವಾದ 'ಡೋಣಿ'ಯನ್ನು ದ್ರೋಣಾಪುರ, ದ್ರೋಣಾಮುಖವೆಂದು ಕರೆಯಲಾಗಿದೆ. ಪೌರಾಣಿತವಾಗಿ ಕ್ರಿ.ಪೂ.೨೦೦೦ ವರ್ಷಗಳ ಹಿಂದೆ ಲಕ್ಕುಂಡಿಯನ್ನು ಶಿಬಿ ಚಕ್ರವರ್ತಿ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಅವನಿಗೆ ಈ ಡೋಣಿ ಗ್ರಾಮದೊಂದಿಗೆ ಸಂಬಂಧವಿತ್ತೆಂದು ಭವಿಷ್ಯೋತ್ತರ ಪುರಾಣದಲ್ಲಿ ಹೇಳಲಾಗಿದೆ.

### ಕೊರ್ಲಹಳ್ಳಿ

ಕೊರ್ಲಹಳ್ಳಿಯು ಮುಂಡರಗಿ ತಾಲೂಕಿನ ಮತ್ತೊಂದು ಐತಿಹಾಸಿಕ ಅವಶೇಷಗಳನ್ನು ಒಳಗೊಂಡಂತಹ ಗ್ರಾಮ. ಈ ಗ್ರಾಮವು ತುಂಗಭದ್ರಾನದಿಯ ಸೆಳವಿಗೆ ಕೊರೆದು, ಕೊರಕಲಾಗಿ, ಈ ಊರಿಗೆ ಕೋರಲಹಳ್ಳಿ ಎಂದು ಹೆಸರು ಬಂದಿತೆಂಬುದು ಸ್ಥಳೀಯರ ಒಂದು ಅಭಿಪ್ರಾಯವಾಗಿದೆ. ಸ್ಥಳೀಯರ ಇನ್ನೊಂದು ಅಭಿಪ್ರಾಯದ ಪ್ರಕಾರ ಕೊರವ ಜನಾಂಗದವರು ಈ ಗ್ರಾಮದಲ್ಲಿ ಅಧಿಕ ಸಂಖ್ಯೆಯಲ್ಲಿ ವಾಸವಾಗಿದ್ದರು ಹೀಗಾಗಿ ಜನಾಂಗವಾಚಿಯಾಗಿ ಇದನ್ನು ಕೊರ್ಲಹಳ್ಳಿ ಎಂದು ಕರೆದಿರುವುದನ್ನು ತಿಳಿಸುತ್ತಾರೆ.

### ಮುಕ್ತುಂಪುರ

ಮುಂಡರಗಿ ತಾಲೂಕಿನ ಈ ಗ್ರಾಮದಲ್ಲಿ ಮುಕ್ತುಂ ಹುಸೇನಿ ಎನ್ನುವ ಒಬ್ಬ ಮುಸ್ಲಿಂ ಸಂತನು ಇಲ್ಲಿ ಅನೇಕ ಪವಾಡಗಳನ್ನು ಮಾಡುತ್ತಿದ್ದರು. ವಿವಿಧ ಮೂಢನಂಬಿಕೆಗಳ ಹಿಂದಿನ ಅನೇಕ ಮಾನಸಿಕ ರೋಗಗಳನ್ನು ಪರಿಹರಿಸುತ್ತಿದ್ದನು. ಹೀಗಾಗಿ ಜನರು ಅವನನ್ನು 'ಮುಕ್ತುಂಫೀರ್' ಎಂದು ಕರೆಯುತ್ತಿದ್ದರು. 'ಫೀರ್' ಎಂದರೆ ಇಲ್ಲಿ 'ದೇವರು' ಎಂದು ತಿಳಿಯಲಾಗಿದೆ. ಈ ಹಿನ್ನಲೆಯಲ್ಲಿಯೇ ಈ ಊರಿಗೆ 'ಮುಕ್ತುಂಪುರ' ಎಂದು ಹೆಸರು ಬಂದಿತೆಂದು ಸ್ಥಳೀಯರು ಅಭಿಪ್ರಾಯವಾಗಿದೆ.

### ಬೆಣ್ಣೆಹಳ್ಳಿ

ಬೆಣ್ಣೆಹಳ್ಳಿ ಗ್ರಾಮ ಅತಿ ಪುರಾತನ ಕಾಲದ ಗ್ರಾಮ. ಇದು ಆರ್ಯದ್ರಾವಿಡರ ಕಾಲದಿಂದಲೂ ಹಿಂದಿದ್ದ ಗ್ರಾಮ. ಈ ಗ್ರಾಮದ ಸಮೀಪವರ್ತಿಯಾಗಿ ಎರಡು ಹಳ್ಳಿಗಳು ಸಮ್ಮೀಲನಗೊಂಡಿವೆ. ನೀರಿನ ಮತ್ತು ಮೇವಿನ ಅನುಕೂಲತೆ ಅಧಿಕ ಪ್ರಮಾಣದಲ್ಲಿ ಇಲ್ಲಿಯ ವಾಸಿಗಳಿಗೆ ಲಭ್ಯವಾಗುತ್ತಿತ್ತು. ಈ ಹಿನ್ನಲೆಯಲ್ಲಿ ಅಲ್ಲಿಯ ಜನರೆಲ್ಲರು ಕೃಷಿಯ ಜೊತೆಗೆ ಪಶುಸಂಗೋಪನೆಯನ್ನು ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡರು. ಹೈನುಗಾರಿಕೆಯ ಪ್ರಾಣಿಗಳನ್ನು ಅವರು ಹೆಚ್ಚು ಜೀವನಾಧಾರಕ್ಕೆ ಅವಲಂಬಿಸತೊಡಗಿದರು. ಹೀಗಾಗಿ ಪ್ರತಿಯೊಬ್ಬರ ಮನೆಯಲ್ಲೂ ಬೆಣ್ಣೆಯನ್ನು, ಹಾಲನ್ನು, ಮೊಸರನ್ನು ತಯಾರಿಸುತ್ತಿದ್ದರು. ಹೆಚ್ಚು ಬೆಣ್ಣೆಯನ್ನು ತಯಾರಿಸುತ್ತಿದ್ದುದರಿಂದ ಈ ಗ್ರಾಮಕ್ಕೆ ಬೆಣ್ಣೆಹಳ್ಳಿ ಎಂದು ಹೆಸರು ಬಂದಿತೆಂಬುದು ಸ್ಥಳೀಯರ ಅಭಿಪ್ರಾಯ.

ಹೀಗೆ ಮುಂಡರಗಿ ಪರಿಸರದ ಅನೇಕ ಗ್ರಾಮಗಳು ವಿವಿಧ ರೀತಿಯ ಐತಿಹ್ಯಗಳಿಂದ ಕೂಡಿದ್ದು ಅಧ್ಯಯನದ ಹಿನ್ನಲೆಯಲ್ಲಿ ಮಹತ್ವವಾದವುಗಳಾಗಿವೆ.

**ಅಡಿಟಿಪ್ಪಣಿ**

೧. ವಿವೇಕ ರೈ ಬಿ.: ಅನ್ವಯಿಕ ಜಾನಪದ, ಪುಟ. ೧೦೪-೧೦೫ ಬೆಂಗಳೂರು ೧೯೯೫.

೨. ಕ್ಯಾತನಹಳ್ಳಿ ರಾಮಣ್ಣ... (ಸಂ): ಬೀದರ್ ಜಿಲ್ಲೆಯ ಜನಪದ ಕಥೆಗಳು, ಪ್ರಸ್ತಾವನೆ, ಪುಟ.೪. ೧೯೭೬.

೩. ಲಕ್ಷ್ಮಣ್ ತೆಲಗಾವಿ (ಸಂ): ಸ್ಥಳೀಯ ಚರಿತ್ರೆ, ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ. (ಲೇ.) ವಿರೂಪಾಕ್ಷಿ ಪೂಜಾರಹಳ್ಳಿ: ಸ್ಥಳೀಯ ಚರಿತ್ರೆ: ಆಕರಗಳ ಸ್ವರೂಪ ಮತ್ತು ಅಧ್ಯಯನ ವಿಧಾನ ಪುಟ.೧೪, ೨೦೦೩.

೪. ಕನ್ನಡ ವಿಶ್ವಕೋಶ, ಸಂಪುಟ ೩, ಪುಟ.೨೫೮. ೧೯೭೦.

೫. ಸುಬ್ಬಣ್ಣ ರೈ: ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು. ಪುಟ. ೮೩ ೧೯೯೪.

೬. ಅದೇ....................ಪುಟ.೮೭

೭. ಜೀಶಂಪ: ಜಾನಪದ ಕೆಲವು ಮುಖಗಳು, ಪು.೬೫

೮. ಪೋಲೀಸ್ ಪಾಟೀಲ್ ಬಸವರಾಜ: ಜಾನಪದ ಚಿಂತನ-ಪುಟ.೧೩೯. ೨೦೦೧.

೯. ಪಾಡೀಗಾರ್ ಎಸ್.ವಿ.: ಶಾಸನಗಳ ಆಕರಗಳು ಪುಟ.೪. ೨೦೦೫.

೧೦. ಹನುಮಾಕ್ಷಿಗೋಗಿ, ರಾಠೋಡ್ ಪಿ.ಕೆ.: ಡಂಬಳ: ಸಾಂಸ್ಕೃತಿಕ ಅಧ್ಯಯನ. ೨೦೦೮.

## ಅಧ್ಯಾಯ ೫

# ಸಮಾರೋಪ

ಕರ್ನಾಟಕವು ಪುರಾತತ್ವ ಸಂಸ್ಕೃತಿ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದಿರುವ ಪ್ರಾಚೀನ ನಾಡಾಗಿದೆ. ಇಲ್ಲಿರುವ ಪ್ರದೇಶಗಳು ಅನೇಕ ವೈಶಿಷ್ಟತೆಗಳಿಂದ ಕೂಡಿವೆ. ಅಂತಹ ವೈಶಿಷ್ಟತೆಯು ಪ್ರಾಗಿತಿಹಾಸಿಕವಾಗಿಯೋ, ಐತಿಹಾಸಿಕವಾಗಿಯೋ, ಸಾಂಸ್ಕೃತಿಕವಾಗಿಯೋ ಅಥವಾ ರಾಜಕೀಯವಾಗಿಯೋ ಮಹತ್ವವನ್ನು ಹೊಂದಿರುತ್ತವೆ. ಇಂತಹ ಹಿನ್ನಲೆಯನ್ನು ಹೊಂದಿರುವ ಮುಂಡರಗಿಯು ಪುರಾತತ್ವ ಚಾರಿತ್ರಿಕ ಹಾಗೂ ಮೌಖಿಕ ಪರಂಪರೆಯ ಹಿನ್ನಲೆಯಲ್ಲಿ ಮಹತ್ವವನ್ನು ಹೊಂದಿದ ಪರಿಸರವಾಗಿದೆ.

ಇತ್ತೀಚಿಗೆ ವಿಭಿನ್ನ ದೃಷ್ಠಿಕೋನಗಳಲ್ಲಿ ಸಂಶೋಧನಾಧ್ಯಯನಗಳು ನಡೆಯುತ್ತಲಿವೆ. ಚರಿತ್ರೆ ರಚನಾಶಾಸ್ತ್ರಗಳಲ್ಲಿ ಇಂತಹ ಅಧ್ಯಯನ ಪ್ರಕ್ರಿಯೆಗಳನ್ನು ಅವಲೋಕಿಸುತ್ತಿದ್ದೇವೆ. ಹೀಗಾಗಿ ಸ್ಥಳೀಯ ಚರಿತ್ರೆ ಮತ್ತು ಮೌಖಿಕ ಚರಿತ್ರೆಗಳ ಪ್ರಾಧಾನ್ಯತೆ ಹೆಚ್ಚಾಗಿರುವ ಹಿನ್ನಲೆಯಲ್ಲಿ ಈ ಅಧ್ಯಯನ ಮಹತ್ವ ಹೊಂದಿದೆ. ಅನೇಕ ವಿದ್ವಾಂಸರು ತಮ್ಮ ವಾದ ಅಥವಾ ಚಿಂತನೆಗಳ ಪ್ರಕಾರ ಶಿಷ್ಟ ಮತ್ತು ಪರಿಶಿಷ್ಟ ಚರಿತ್ರೆಯ ಆಕರಗಳು ಪರಸ್ಪರ ಪೂರಕವಾಗಿರುತ್ತವೆ. ಅನೇಕ ಸಂದರ್ಭಗಳಲ್ಲಿ ಶಿಷ್ಟ ಚರಿತ್ರೆಯಲ್ಲಿ ಇಲ್ಲದಿರುವ ಮೌನಗಳಿಗೆ ಮೌಖಿಕ ಆಕರಗಳು ಉತ್ತರವನ್ನು ನೀಡುತ್ತವೆ ಎಂಬುದರ ವಿಶ್ಲೇಷಣೆ ಮಾಡಿದ್ದಾರೆ. ಈ ಹಿನ್ನಲೆಯಲ್ಲಿ ಪುರಾತತ್ವ ಆಕರಗಳ ಜೊತೆ ಜೊತೆಗೆ ಐತಿಹ್ಯಗಳು ಹೇಳುವ ಸಂಗತಿಗಳನ್ನು ಏಕಕಾಲಕ್ಕೆ ಸಮನ್ವಯಗೊಳಿಸಿ ಅಧ್ಯಯನದ ಕೊರತೆಯನ್ನು ತುಂಬುವ ಪ್ರಯತ್ನವೇ ಮುಂಡರಗಿ ಪರಿಸರದ ಪುರಾತತ್ವ ಮತ್ತು ಐತಿಹ್ಯ ಆಧಾರಿತ ಅಧ್ಯಯನವಾಗಿದೆ.

ವಿಸ್ತೃತ ಭೂ ಪ್ರದೇಶದಲ್ಲಿ ಹರಡಿಕೊಂಡಿರುವ ಅಥವಾ ಗೋಚರವಾಗುವ ಅನೇಕ ಪ್ರಾಚ್ಯಾವಶೇಷಗಳನ್ನು ಮತ್ತು ಐತಿಹ್ಯಗಳನ್ನು ಅಧ್ಯಯನ ಮಾಡುವುದಕ್ಕಿಂತ ಸೀಮಿತ ಪ್ರದೇಶಕ್ಕೆ ಸಂಬಂಧಿಸಿದ ಐತಿಹಾಸಿಕ ಆಕರಗಳನ್ನು ಅಧ್ಯಯನಿಸುವ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ. ಆದರಿಂದಾಗಿ ಆ ಪ್ರದೇಶದ ಮಟ್ಟಿಗಾದರೂ ಒಂದು ಸಮಗ್ರತೆ ಉಂಟಾಗುತ್ತದೆ. ಮುಂಡರಗಿ ಪರಿಸರದ ಚರಿತ್ರೆಯನ್ನು ವಿಶ್ಲೇಷಣಾತ್ಮಕ ಹಾಗೂ ವಿವರಣಾತ್ಮಕವಾಗಿ ಕಟ್ಟಿಕೊಡುವ ಪ್ರಯತ್ನದ ಹಿನ್ನಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ಆ ಮೂಲಕ ಪುರಾತತ್ವ ಮತ್ತು ಅಲ್ಲಿಯ ಪರಿಸರದ ಐತಿಹ್ಯ ವಿಷಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವ, ಆಲೋಚಿಸುವ ಪ್ರಯತ್ನ ಮಾಡಲಾಯಿತು. ಇಲ್ಲಿರುವ ಪ್ರಾಗಿತಿಹಾಸದ ನೆಲೆ, ಇತಿಹಾಸ ಕಾಲದ ನೆಲೆ, ಐತಿಹಾಸಿಕ

ದೇವಾಲಯ, ಮೂರ್ತಿಶಿಲ್ಪ ಶಾಸನ ಹಾಗೂ ಮೌಖಿಕ ಆಕರಗಳಾದ ಐತಿಹ್ಯಗಳನ್ನು ಅಧ್ಯಯನದ ಉದ್ದೇಶದ ಹಿನ್ನಲೆಯಲ್ಲಿ ಸಂಗ್ರಹಿಸಿ ಸಂಯೋಜಿಸಿ, ವಿಶ್ಲೇಷಿಸಿ ಅಧ್ಯಯನಕ್ಕೆ ಸಮಗ್ರತೆಯನ್ನು ತಂದುಕೊಡಲು ಪ್ರಯತ್ನಿಸಿದ್ದೇನೆ.

ಮುಂಡರಗಿಯು ಭೌಗೋಳಿಕವಾಗಿ ತುಂಗಭದ್ರಾನದಿ ಮತ್ತು ಕಪ್ಪತ್ತಗುಡ್ಡದ ಬೆಟ್ಟಸಾಲನ್ನು ಹೊಂದಿದೆ. ಈ ಬೆಟ್ಟ ಪ್ರದೇಶದಲ್ಲಿ ವಿಶೇಷವಾಗಿ ಕಪ್ಪತ್ತಗುಡ್ಡದಲ್ಲಿರುವ ಗವಿಯಾಸರೆ, ಕಲ್ಲಾಸರೆಗಳು ಪ್ರಾಗಿತಿಹಾಸದ ಮಾನವನು ವಾಸಮಾಡಿರಬಹುದಾದ ಜನವಸತಿಯ ಕುರುಹುಗಳಾಗಿವೆ. ಏಕೆಂದರೆ ಅಂತಹ ಪರಿಸರದ ಅವಶ್ಯಕತೆಯನ್ನು ಶಿಲಾಯುಗದ ಮಾನವನು ಹೊಂದಿದ್ದನ್ನು ಇಲ್ಲಿ ಸ್ಮರಿಸಬಹುದು.

ಪ್ರಾಗಿತಿಹಾಸ ಅಥವಾ ಶಿಲಾಯಗ ಸಂಸ್ಕೃತಿಯ ಕೆಲವು ನಿವೇಶನ ಮತ್ತು ಪ್ರಾಚ್ಯಾವಶೇಷಗಳು ಈ ಪರಿಸರದ ಮೇವುಂಡಿ, ಬಿದರಳ್ಳಿ, ಜಾಲವಾಡಿಗಿ, ಕಲಕೇರಿಗಳಲ್ಲಿ ಕಂಡುಬಂದವು. ಹೀಗಾಗಿ ಪ್ರಾಗಿತಿಹಾಸದ ಕುರುಹುವಿನ ಖಚಿತತೆ, ಅಧಿಕೃತತೆ ಇದರಿಂದ ಸ್ಪಷ್ಟವಾಯಿತು. ಮೇವುಂಡಿಯಲ್ಲಿ ದೊರೆತಿರುವ ಶಿಲಾಯುಧಗಳು ನವಶಿಲಾಯುಗಕ್ಕೆ ಸಂಬಂಧಿಸಿದವುಗಳಾಗಿದ್ದು ಅವುಗಳನ್ನು ನಯಗೊಳಿಸಿ ತಯಾರಿಸಲಾಗಿದೆ. ವಿವಿಧ ಗಾತ್ರದಲ್ಲಿರುವ ಆಯುಧಗಳು ಅವರ ಜೀವನಕ್ರಮದಲ್ಲಿ ಮುಖ್ಯವಾದ ಪಾತ್ರವಹಿಸಿರುವ ಸಾಧ್ಯತೆ ಹೆಚ್ಚು. ತೆಳ್ಳನೆಯ ಮಡಿಕೆಯ ಚೂರಿನ ಅವಶೇಷಗಳು ಸಹ ಈ ನೆಲೆಯಲ್ಲಿ ಕಂಡುಬಂದಿದ್ದು ಅವು ಕೆಂಪು ಮತ್ತು ಕಪ್ಪು ವರ್ಣದಿಂದ ಕೂಡಿವೆ.

ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಈ ಪರಿಸರದಲ್ಲಿವೆ ಎನ್ನುವ ಬಗ್ಗೆ ಶ್ರೀಮಹಲಿಂಗ ಯಾಳಗಿಯವರು ತಮ್ಮ ಮುಂಡರಗಿ ನಾಡ ದರ್ಶನದಲ್ಲಿ ಉಲ್ಲೇಖವನ್ನು ಮಾಡಿದ್ದಾರೆ. ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಬೃಹತ್ ಶಿಲೆಗಳಿಂದ ವಿವಿಧ ಶಿಲಾಗೋರಿಗಳನ್ನು ನಿರ್ವಹಿಸುತ್ತಿದ್ದರು ಎಂಬುದು ಇದರ ಪ್ರಮುಖ ಲಕ್ಷಣವಾಗಿದೆ. ಹಾಗಾಗಿ ಇಲ್ಲಿಯ ಕಲಕೇರಿ ಮತ್ತು ಜಾಲವಾಡಿಗಿಗಳಲ್ಲಿ ಕಂಡುಬರುವ ಮಣ್ಣಿನ ಕುಪ್ಪರಿಗೆಗಳನ್ನು ಅವರು ಅಗೆದು ತೆಗೆದಾಗ ಅದರಲ್ಲಿ ಮಣ್ಣಿನ ಕುಡಿಕೆಗಳು, ಕಬ್ಬಿಣದ ಆಯುಧಗಳು ಲಭ್ಯವಾದ ಗುರುತಾಗಿ ಅವುಗಳನ್ನು ಕಬ್ಬಿಣದ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದವುಗಳೆಂದು ಸ್ಪಷ್ಟಪಡಿಸಿದರು. ಸ್ಥಳೀಯರು ಅವುಗಳನ್ನು 'ಸಿದ್ಧರಕಟ್ಟೆ' ಅಥವಾ 'ಪಾಂಡವರ ಕಟ್ಟೆ' ಎಂದು ಕರೆಯುತ್ತಾರೆ. ಅಂತಹ ಯಾವುದೇ ಪ್ರಾಚ್ಯಾವಶೇಷಗಳೆ ಇಂದು ಮಣ್ಣಿನಲ್ಲಿ ಹೂತು ಹೋಗಿವೆ. ಹೀಗೆ ಪ್ರಾಚೀನ ಶಿಲಾಯುಗ ಸಂಸ್ಕೃತಿಯ ವಿವಿಧ ನೆಲೆಗಳ ಅನ್ವೇಷಣೆ, ಶೋಧನೆಯಿಂದ ಇದರ ಪ್ರಾಚೀನತೆ ಪ್ರಾಗೈತಿಹಾಸಿಕ ಯುಗದ ಆದಿ ಹಳೆಯ ಶಿಲಾಯುಗದಿಂದ ಬೃಹತ್‌ಶಿಲಾಯುಗದವರೆಗೆ ಗುರುತಿಸಬಹುದಾಗಿದೆ.

ಇತಿಹಾಸ ಕಾಲದ ನೆಲೆಗಳಾದ ಡಂಬಳ, ಬಿದರಳ್ಳಿ, ಡೋಣಿ, ಹಿರೇವಡ್ಡಟ್ಟಿ, ಪೇಠಾಲೂರು, ಜಂತ್ಲಿ, ಶಿರೂರು, ಬರದೂರು, ವಿಠಲಾಪುರ, ತಾಮ್ರಗುಂಡಿ, ಮೇವುಂಡಿ ಮುಂತಾದ ಅನೇಕ ನೆಲೆಗಳಲ್ಲಿ ಕಂಡುಬಂದಿರುವ ಶಾಸನಗಳು, ಅವುಗಳಲ್ಲಿಯ ವಿಷಯಗಳು ರಾಜಕೀಯ ಚರಿತ್ರೆಯ

ಹಲವು ಸಂಗತಿಗಳನ್ನು ತಿಳಿಯಲು ಸಹಾಯಕವಾಗಿವೆ. ಅಷ್ಟೇ ಅಲ್ಲದೆ ವಿವಿಧ ಧಾರ್ಮಿಕ ವಿಷಯಗಳನ್ನು, ದಾನದತ್ತಿಗಳನ್ನು ಅವು ಉಲ್ಲೇಖಿಸುತ್ತವೆ. ಆಡಳಿತ ವಿಭಾಗಗಳ ಬಗ್ಗೆಯು ಸಹ ಆಮೂಲಾಗ್ರ ಸಂಗತಿಗಳನ್ನು ಒಳಗೊಂಡಿವೆ. ಹೀಗೆ ಒಂದಿಲ್ಲೊಂದು ಐತಿಹಾಸಿಕ ವಿಷಯಗಳನ್ನು, ಐತಿಹ್ಯಗಳನ್ನು ಹೊಂದಿರುವ ಈ ನೆಲೆಗಳು ಅಧ್ಯಯನದಲ್ಲಿ ಬಹುಮುಖ್ಯವಾಗಿವೆ.

ಚಾರಿತ್ರಿಕ ಕಾಲಘಟ್ಟಕ್ಕೆ ಸಂಬಂಧಿಸಿದ ಅನೇಕ ಶಾಸನಗಳು ಈ ಪರಿಸರದ ಅನೇಕ ಭಾಗಗಳಲ್ಲಿ, ಗ್ರಾಮಗಳಲ್ಲಿ ಕಂಡುಬಂದಿವೆ. ಅವುಗಳಲ್ಲಿ ಡಂಬಳ, ಡೋಣಿ, ಮೇವುಂಡಿ, ಶಿರೂರು, ಪೇಠಾಲೂರು, ಬಿದರಳ್ಳಿ, ಕಲಕೇರಿ, ಚಿಕ್ಕವಡ್ಡಟ್ಟಿ, ಹಿರೇವಡ್ಡಟ್ಟಿ, ಹೈತಾಪುರ, ಕಕ್ಕೂರು, ಕೊರ್ಲಹಳ್ಳಿ, ಬಾಗೇವಾಡಿ, ಬೂದಿಹಾಳ, ಮುಷ್ಠಿಕೊಪ್ಪ ಮುಂತಾದವುಗಳು ಮುಖ್ಯವಾಗಿವೆ. ಈ ಎಲ್ಲಾ ಶಾಸನಗಳ ಪರಿಶೀಲನೆಯಿಂದ ಈ ಪರಿಸರದಲ್ಲಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚೂರಿ, ಸೇವುಣ, ಹೊಯ್ಸಳ, ವಿಜಯನಗರ ಅರಸುಮನೆತನಗಳ ಆಳ್ವಿಕೆಯ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯನ್ನು ಗುರುತಿಸಲಾಗಿದೆ.

ಮೇವುಂಡಿಯಲ್ಲಿ ದೊರೆತ ಕ್ರಿ.ಶ.೮೬೫ರ ಶಾಸನವು ರಾಷ್ಟ್ರಕೂಟರ ಒಂದನೆ ಅಮೋಘವರ್ಷನ ಬಗ್ಗೆ ಮಾಹಿತಿ ನೀಡುವ ಪ್ರಥಮ ಲಿಖಿತ ದಾಖಲೆಯಾಗಿದೆ. ಅಮೋಘವರ್ಷನ ನಂತರ ಆಳ್ವಿಕೆ ಬಂದ ಎರಡನೇ ಕೃಷ್ಣನ ಬಗ್ಗೆ ಕ್ರಿ.ಶ. ೮೭೮ರ ಶಾಸನವು ವಿವರಣೆ ನೀಡುವುದು. ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಸಂಬಂಧಿಸಿದಂತೆ ದೊರೆತ ಪ್ರಥಮ ಶಾಸನವೆಂದರೆ ಐದನೆ ವಿಕ್ರಮಾದಿತ್ಯನ ಕ್ರಿ.ಶ.೧೦೧೦ರ ಆಲೂರು ಶಾಸನವಾಗಿದೆ. ಹೀಗಾಗಿ ಇವನಿಂದಲೇ ಕಲ್ಯಾಣ ಚಾಲುಕ್ಯರ ಇತಿಹಾಸ ಪ್ರಾರಂಭವಾಗಿರುವುದು ತಿಳಿದುಬರುತ್ತದೆ.

ಕಲ್ಯಾಣದ ಚಾಲುಕ್ಯರ ನಂತರ ಆಳ್ವಿಕೆ ಮಾಡಿದವರು ಕಲಚೂರಿಗಳು. ಕಲಚೂರಿಗಳ ಆಳ್ವಿಕೆಯ ಚರಿತ್ರೆಯ ಬಗ್ಗೆ ತಿಳಿಸುವ ಏಕೈಕ ಶಾಸನವೆಂದರೆ ಎರಡನೇ ಸಂಕಮನ ಕಾಲದ ಡೋಣಿಯ ಶಾಸನವು ಇಲ್ಲಿ ಮಹತ್ವವಾದುದಾಗಿದೆ. ಇವರ ನಂತರ ಆಳ್ವಿಕೆ ಮಾಡಿದ ಸೇವುಣ ವಂಶಜರ ಬಗ್ಗೆ ತಿಳಿಸುವ ಶಾಸನಗಳೆಂದರೆ ಡೋಣಿ ಮತ್ತು ಮೇವುಂಡಿ ಶಾಸನಗಳಾಗಿವೆ. ಹೊಯ್ಸಳ ರಾಜಮನೆತನದ ಬಗೆಗೆ ತಿಳಿಸುವ ಶಾಸನವೆಂದರೆ ಮೇವುಂಡಿಯ ಎರಡನೇ ಬಲ್ಲಾಳನ (ಕ್ರಿ.ಶ.೧೧೭೦-೧೨೨೦) ಕಾಲದ ಶಾಸನವಾಗಿದೆ. ಕೊನೆಯದಾಗಿ ವಿಜಯನಗರ ಕಾಲಕ್ಕೆ ಸಂಬಂಧಿಸಿದ ಶಾಸನವೆಂದರೆ ಬ್ಯಾಗಿನಕೇರಿ ಗ್ರಾಮದ ಕೆರೆಯಂಚಿನಲ್ಲಿರುವ ಶಾಸನವಾಗಿದೆ. ಈ ಶಾಸನದಲ್ಲಿ ಉಲ್ಲೇಖಿತ ಗೋಪಣ್ಣ ಎಂಬುವವನು ವಿಜಯನಗರ ಅರಸನಾದ ಇಮ್ಮಡಿ ಹರಿಹರನ ಅಧಿಕಾರಿಯಾಗಿರಬಹುದೆಂದು ತಿಳಿದುಬರುತ್ತದೆ. ಹೀಗೆ ಅನೇಕ ಶಾಸನಗಳು ರಾಜಕೀಯ ಚರಿತ್ರೆಯ ಜೊತೆಗೆ ಸಾಂಸ್ಕೃತಿಕ ಅಂಶಗಳ ಬಗೆಗಿನ ಹಲವು ವಿಚಾರಗಳನ್ನು ತಿಳಿಸುತ್ತವೆ.

ಮುಂಡರಗಿ ಪರಿಸರದಲ್ಲಿ ರಾಜ್ಯಬಾರ ಮಾಡಿದ ಅರಸುಮನೆತನಗಳು ಆಡಳಿತದಲ್ಲಿ ದಕ್ಷತೆಯನ್ನು ಸಾಧಿಸಲು, ಆಡಳಿತವು ಸರಿಯಾದ ಮಾರ್ಗದಲ್ಲಿ ಸಾಗಲು ಆಡಳಿತ ವಿಭಾಗಗಳನ್ನು ರಚಿಸಿಕೊಂಡಿದ್ದರು. ಅದರಲ್ಲಿ ಮಾಸವಾಡಿ-೧೪೦ ಎಂಬ ಹೆಸರಿನ ಆಡಳಿತ ವಿಭಾಗವು ಈ ಪರಿಸರದಲ್ಲಿದ್ದ ಪ್ರಮುಖ ಆಡಳಿತ ಘಟಕ. ಆಡಳಿತ ವಿಭಾಗದಲ್ಲಿ ಬಹುತೇಕವಾಗಿ ಮುಂಡರಗಿಯ ಎಲ್ಲ ಗ್ರಾಮಗಳು ಸೇರುತ್ತವೆ. ಇಲ್ಲಿ ಆಡಳಿತ ವಿಭಾಗವಿತ್ತೆ ಎಂಬುದಕ್ಕೆ ಪುರಾವೆಯಾಗಿ ದೊರೆಯುವ ಶಾಸನಾಕರವೆಂದರೆ ಡಂಬಳದಲ್ಲಿರುವ ಶಾಸನ. ಇದರಲ್ಲಿ ಈ ವಿಭಾಗದ ಉಲ್ಲೇಖವನ್ನು ಕಾಣಬಹುದಾಗಿದೆ. ಜೊತೆಗೆ ಇದಕ್ಕೆ ಎರು ಉಪ ವಿಭಾಗಗಳು ಇದ್ದವೆಂಬ ಮಾಹಿತಿಯು ಸಹ ಕಂಡುಬರುತ್ತದೆ. ಅದರಲ್ಲಿ ಮೊದಲನೆಯದಾಗಿ ಸುರಕ-೧೨ ಮತ್ತೊಂದು ಅವಗವಾಡಿ-೧೨ ಎಂಬವುಗಳಾಗಿವೆ. ಈ ರೀತಿಯ ವ್ಯವಸ್ಥೆಯಿಂದಾಗಿ ಇಲ್ಲಿ ಆಳ್ವಿಕೆ ಮಾಡಿದ ಅರಸುಮನೆತನಗಳು ಆಡಳಿತದಲ್ಲಿ ವಿಕೇಂದ್ರೀಕರಣ ಪದ್ಧತಿಯನ್ನು ಅಳವಡಿಸಿಕೊಂಡಿದ್ದರೆಂಬ ಸಂಗತಿ ತಿಳಿದುಬರುತ್ತದೆ.

ಪುರಾತತ್ವ ಆಕರಗಳು ಮತ್ತು ಐತಿಹ್ಯಗಳು ಎಂಬ ವಿಷಯವನ್ನು ಕಾಲಾನುಕ್ರಮಣಿಕೆಯ ಹಿನ್ನಲೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಪುರಾತತ್ವ ಆಕರಗಳಿಗೆ ಸಂಬಂಧಿಸಿದಂತೆ ಕೆಲವು ಪ್ರಾಗಿತಿಹಾಸದ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿ ಆದಿ ಹಳೆಶಿಲಾಯುಗದ ನೆಲೆಯಾಗಿ ಬಿದರಳ್ಳಿ, ಆರಂಭ ಇತಿಹಾಸ ಕಾಲದ ನೆಲೆಯಾಗಿ ಶೀರನಹಳ್ಳಿ ನವಶಿಲಾಯುಗದ ನೆಲೆಯಾಗಿ ಮೇವುಂಡಿ ಹಾಗೂ ಬೃಹತ್‌ಶಿಲಾಯುಗದ ನೆಲೆಯಾಗಿ ಕಲಕೇರಿಗಳು ಮಹತ್ವವನ್ನು ಹೊಂದಿವೆ. ಮೇವುಂಡಿಯಲ್ಲಿ ದೊರೆತ ಶಿಲಾಯುಧಗಳು ಹಾಗೂ ತೆಳು ಮೃತ್ಪಾತ್ರೆಯ ಅವಶೇಷಗಳಿಂದ ಪ್ರಾಗಿತಿಹಾಸಿಕ ಕಾಲಘಟ್ಟದ ಸಂಗತಿಗಳನ್ನು ಅರಿಯಲಿಕ್ಕೆ ಸಾಧ್ಯವಾಯಿತು. ಹೀಗೆಯೇ ಇತಿಹಾಸ ಕಾಲಕ್ಕೆ ಸಂಬಂಧಿಸಿದ ನೆಲೆಗಳಾದ ಬಿದರಳ್ಳಿ, ಡಂಬಳ, ಶಿರೂರು, ಡೋಣಿ, ತಾಮ್ರಗುಂಡಿ, ಕೊರ್ಲಹಳ್ಳಿ, ಮೇವುಂಡಿ, ಪೇಠಾಲೂರು, ವಿಠಲಾಪುರ, ಚಿಕ್ಕವಡ್ಡಟ್ಟಿ, ಹಿರೇವಡ್ಡಟ್ಟಿ ಗ್ರಾಮಗಳು ಒಂದಿಲ್ಲೊಂದು ಐತಿಹಾಸಿಕ ಸಂಗತಿಗಳಿಂದ ಮಹತ್ವವಾಗಿರುವುದನ್ನು ಕ್ಷೇತ್ರಕಾರ್ಯ ಮತ್ತು ಅಧ್ಯಯನದಿಂದ ತಿಳಿಯುತ್ತೇವೆ.

ಮುಂಡರಗಿ ಪರಿಸರದ ಗತಕಾಲದ ಹಾಗೂ ಸಂಸ್ಕೃತಿಯನ್ನ ತಿಳಿಯುವಲ್ಲಿ ಅಲ್ಲಿಯ ದೇವಾಲಯಗಳು ಹಾಗೂ ಐತಿಹ್ಯಗಳು ಸಹಾಯಕವಾಗಿ ನಿಲ್ಲುತ್ತವೆ. ಅವುಗಳ ರಚನೆ, ನಿರ್ಮಾಣ ಶೈಲಿ ಹಾಗೂ ಕಲೆಯ ಸೊಬಗನ್ನು ಪ್ರಸ್ತುತ ಅಧ್ಯಯನದಲ್ಲಿ ಸ್ಪಷ್ಟಪಡಿಸಲಾಗಿದೆ. ಜೈನ, ಬೌದ್ಧ, ಶೈವ, ವೈಷ್ಣವ ಹಾಗೂ ಶಾಕ್ತ ಧರ್ಮಗಳಿಗೆ ಸಂಬಂಧಿಸಿದ ವಿಭಿನ್ನ ದೇವಾಲಯ ಸ್ಮಾರಕಗಳು, ಇಂದು ಅವಸಾನದ ಅಂಚಿನಲ್ಲಿವೆ. ಹೀಗಾಗಿ ಅವುಗಳ ಸಮಗ್ರ ಹಾಗೂ ಸೂಕ್ಷ್ಮ ಅಧ್ಯಯನಗಳನ್ನ ಕೈಗೊಳ್ಳುವ ಅವಶ್ಯಕತೆ ಇದೆ. ಈ ಹಿನ್ನಲೆಯಲ್ಲಿ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಇಲ್ಲಿಯ ಶಿಲ್ಪಾವೇಶಗಳು ಶೈವ, ವೈಷ್ಣವ, ಶಾಕ್ತ, ಜೈನ ಹಾಗೂ ಬೌದ್ಧ ಪಂಥಗಳಿಗೆ ಸೇರಿದವುಗಳಾಗಿದ್ದು ವೈವಿಧ್ಯಮಯ ಸ್ಮಾರಕಾವಶೇಷಗಳಾಗಿವೆ. ಈ ಪರಿಸರದ ಡಂಬಳ, ಮೇವುಂಡಿ, ಶಿರೂರು, ಪೇಠಾಲೂರು, ಹಿರೇವಡ್ಡಟ್ಟಿ, ಚಿಕ್ಕವಡ್ಡಟ್ಟಿ, ತಾಮ್ರಗುಂಡಿ, ಬರದೂರು, ಪೇಠಾಲೂರು ಮುಂತಾದ ಗ್ರಾಮಗಳಲ್ಲಿ ಕಂಡುಬರುವ ಶಿಲ್ಪ ಹಾಗೂ ಸ್ಮಾರಕಗಳ ಕುರಿತಾಗಿಯು ಸಂಬಂಧಿಸಿದ ಅಧ್ಯಯನದಲ್ಲಿ ಪ್ರಯತ್ನ ಮಾಡಲಾಗಿದೆ.

ಕೇವಲ ಸ್ಮಾರಕ ಹಾಗೂ ಲಿಖಿತ ದಾಖಲೆಗಳು ಮಾತ್ರ ಇತಿಹಾಸ ರಚನೆಯ ಪ್ರಮಾಣಬದ್ಧ ಆಕರಗಳಲ್ಲ, ಬದಲಾದ ಸಂದರ್ಭಗಳಲ್ಲಿ ಅಲಿಖಿತ ಹಾಗೂ ಮೌಖಿಕ ಕಥನಗಳು ಚರಿತ್ರೆಯನ್ನು ಪುನರ್‌ರೂಪಿಸುವಲ್ಲಿ ಪ್ರಧಾನಪಾತ್ರ ವಹಿಸುತ್ತವೆ. ಇದನ್ನು ಮನಗಂಡು ಪುರಾತತ್ವ ಆಕರಗಳ ಪೂರಕವಾಗಿ ಐತಿಹ್ಯಗಳು ಯಾವ ರೀತಿ ಸಹಾಯಕವಾಗಿ ನಿಲ್ಲುತ್ತವೆ ಎಂಬುದನ್ನು ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಸ್ಮಾರಕಗಳು ಹಾಗೂ ಲಿಖಿತ ದಾಖಲೆಗಳಲ್ಲಿ ಗುಪ್ತವಾಗಿ ಹುದುಗಿ ಹೋಗಿರುವ ಐತಿಹ್ಯಗಳನ್ನು ಬಿಡಿಸುವ ಸ್ವಲ್ಪಮಟ್ಟಿನ ಪ್ರಯತ್ನ ಮಾಡಲಾಗಿದೆ.

ಈ ಸಂಪ್ರಬಂಧದ ಹೃದಯಭಾಗ ಐತಿಹ್ಯಗಳಾಗಿವೆ. ಲಿಖಿತ ದಾಖಲೆಯಲ್ಲಿ ತಿಳಿಸಲಾಗದ ಅನೇಕ ಸಂಗತಿಗಳನ್ನು ಮೌಖಿಕ ಸಾಮಗ್ರಗಳಿಂದ ಅರಿಯುವ ಪ್ರಸ್ತುತ ಪಡಿಸುವ ಉದ್ದೇಶವನ್ನಿಲ್ಲಿ ಚರ್ಚಿಸಲಾಗಿದೆ. ಅಂದರೆ ಶಿಷ್ಟ ಮತ್ತು ಪರಿಶಿಷ್ಟ ಚರಿತ್ರೆಯ ಆಕರಗಳು ಪರಸ್ಪರ ಪೂರಕಗಳಾಗಿರುತ್ತವೆ. ಅವುಗಳಲ್ಲಿ ಅನೇಕ ಸಂದರ್ಭಗಳಲ್ಲಿ ಶಿಷ್ಟಚರಿತ್ರೆಯಲ್ಲಿ ಇಲ್ಲದಿರುವ ಮೌನಗಳಿಗೆ ಅವು ಉತ್ತರವನ್ನು ನೀಡುತ್ತವೆ. ಹೀಗಾಗಿ ಐತಿಹ್ಯಗಳು ಚರಿತ್ರೆಯ ಆಕರಗಳೂ ಹೌದು, ಆಕರಗಳ ಇತಿಹಾಸವೂ ಹೌದು ಎಂಬುದನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಈ ಮೂಲಕ ಮುಂಡರಗಿ ಪರಿಸರದ ಶಾಸನೋಕ್ತ ಐತಿಹ್ಯಗಳನ್ನು, ಮೌಖಿಕ ಕಥನಗಳನ್ನು ಹಾಗೂ ಸ್ಥಳಾಧಾರಿತ ಐತಿಹ್ಯಗಳ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಈ ಮೂಲಕ ಬಹುತೇಕವಾಗಿ ಅವಸಾನದ ಅಂಚಿನಲ್ಲಿರುವ ದೇವಾಲಯಗಳನ್ನು ಶಿಲ್ಪಾವಶೇಷಗಳನ್ನು ಸಂರಕ್ಷಿಸುವುದು ಹಾಗೆಯೇ ಪ್ರಾಗಿತಿಹಾಸದ ಕುರುಹುಗಳನ್ನು ಹೊಂದಿರುವ ನೆಲೆಗಳಲ್ಲಿ ಉತ್ಖನನ ಕಾರ್ಯ ಕೈಗೊಂಡು ಇತಿಹಾಸದ ಆಕರಗಳ ಹರಿವನ್ನು ಹೆಚ್ಚಿಸುವ ಅಗತ್ಯತೆ ಇದೆ. ಚರಿತ್ರೆಯಲ್ಲಿ ನಿರ್ಲಕ್ಷಿಸಲ್ಪಟ್ಟ ಮುಂಡರಗಿ ಪರಿಸರದಲ್ಲಿ ದೊರೆಯುವ ಪುರಾತತ್ವ ಹಾಗೂ ಮೌಖಿಕ ಆಕರಗಳನ್ನು ಇಲ್ಲಿ ಪ್ರಸ್ತುತ ಪಡಿಸಲಾಗಿದೆ. ಅಷ್ಟೇ ಅಲ್ಲದೆ ಈಚೆಗೆ ಕಪ್ಪತ್ತಗುಡ್ಡದಲ್ಲಿ ನಡೆಯುತ್ತಿರುವ ಅಕ್ರಮ ಗಣಿಗಾರಿಕೆಯಿಂದಾಗಿ ಬೆಟ್ಟಗಳು ನೆಲಸಮವಾಗುವ ಹಾಗೂ ಪ್ರಾಕೃತಿಕ ಸಂಪತ್ತು ಹಾಳಾಗುವ ಭೀತಿಯನ್ನು ಹೆದರಿಸುತ್ತಲಿವೆ. ಈ ಹಿನ್ನಲೆಯಲ್ಲಿ ಸಂಬಂಧಿಸಿದ ಇಲಾಖೆ ಇತ್ತ ಗಮನಹರಿಸಬೇಕಿದೆ.

## ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| ೦೧. | ಪ್ರಕಾಶಪ್ಪ ಸಜ್ಜನ | ೪೩ | ಬರದೂರು | ವ್ಯವಸಾಯ |
| ೦೨. | ಹಂಚಾಳಪ್ಪ ಉಪ್ಪಾರ | ೩೫ | ಬರದೂರು | ವ್ಯವಸಾಯ |
| ೦೩. | ಶೇಖರಗೌಡ ಪಾಟೀಲ | ೪೦ | ಸಿಂಗಟಾಲೂರು | ಕಾರ್ಯದರ್ಶಿ |
| ೦೪. | ಕಾಶೀನಾಥ ಬೆಳಮೊಗ್ಗದ | ೪೦ | ಮುಂಡರಗಿ | ಉಪನ್ಯಾಸಕರು |
| ೦೫. | ಚಂದ್ರಯ್ಯ ಗೋಣೆಸ್ವಾಮಿ | ೫೦ | ಗುಮ್ಮಗೋಳ | ಮಠದ ಸ್ವಾಮಿಗಳು |
| ೦೬. | ಅಚ್ಚಪ್ಪ ದೇಸಾಯಿ | ೭೫ | ಕಲಕೇರಿ | ವ್ಯವಸಾಯ |
| ೦೭. | ಹನುಮಪ್ಪ ಪೂಜಾರ | ೭೦ | ಕಕ್ಕೂರ | ವ್ಯವಸಾಯ |
| ೦೮. | ಶಿವಮೂರ್ತಿಗೌಡ ಪಾಟೀಲ್ | ೬೦ | ಬೆಣ್ಣಿಹಳ್ಳಿ | ವ್ಯವಸಾಯ |
| ೦೯. | ಹನುಮಪ್ಪ ದಾನಪ್ಪ ಹಲವಾಗಲಿ | ೪೦ | ನಾಗರಳ್ಳಿ | ವ್ಯವಸಾಯ |
| ೧೦. | ಬಿಚನಹಳ್ಳಿ ದೇವಣ್ಣ | ೪೯ | ಕೋರ್ಲಹಳ್ಳಿ | ವ್ಯವಸಾಯ |
| ೧೧. | ನೀಲವ್ವ ನೀಲಪ್ಪ ಗೋಣೆ | ೫೦ | ಬಿದರಳ್ಳಿ | ಟೈಲರ್ |
| ೧೨. | ಹೊಳಲಪ್ಪ, ಕಳಸಾಪುರ | ೪೦ | ಬಿದರಳ್ಳಿ | ವ್ಯವಸಾಯ |
| ೧೩. | ಯಲ್ಲಮ್ಮ ಪೂಜಾರ | ೪೦ | ಮುರುಡಿ | ಪೂಜಾರಿ |
| ೧೪. | ಹನುಮರೆಡ್ಡಿ ಪಿ.ರಾಜೂರು | ೪೪ | ಮುರುಡಿ | ವ್ಯವಸಾಯ |
| ೧೫. | ಹನುಮಂತಗೌಡ ಪಾಟೀಲ್ | ೬೮ | ಮುರುಡಿ | ವ್ಯವಸಾಯ |
| ೧೬. | ಬಿ.ಎಚ್.ಅಪರಂಜಿ | ೫೮ | ಪೇಠಾಲೂರು | ಕೃಷಿ |
| ೧೭. | ಶಿವಪ್ಪಯ್ಯ, ದೊಡ್ಡ ಬಿಷ್ಟಪ್ಪಯ್ಯ | ೬೫ | ವಿಠಲಾಪುರ | ಕೃಷಿ |
| ೧೮. | ಎಸ್.ವಿ.ಹಾರೋಗೇರಿ | ೪೦ | ಮುಂಡರಗಿ | ಶಿಕ್ಷಕರು |

## ಗ್ರಂಥಋಣ


೦೧. ಅಪರ್ಣ. ಕೂ.ಸ. : ಕರ್ನಾಟಕ ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೪.

೦೨. ಈರಣ್ಣ ಕೆ.ಪಿ. : ಚಾಲುಕ್ಯರ ಸಾಂಸ್ಕೃತಿಕ ಪರಂಪರೆ, ಮನು ಸಾಹಿತ್ಯ ಪ್ರಕಾಶನ, ಧಾರವಾಡ. ೧೯೯೮.

೦೩. ಕರಿಬಸಪ್ಪ ಎ.: ಬಳ್ಳಾರಿ ಜಿಲ್ಲೆಯ ಐತಿಹ್ಯಗಳು (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೦೪. ಕಲಬುರ್ಗಿ ಎಂ.ಎಂ.: ಸಮಾಧಿ ಬಲಿದಾನ ವೀರ ಮರಣ ಸ್ಮಾರಕಗಳು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು. ೨೯೮೦.

೦೫. ಕಲಬುರ್ಗಿ, ಎಂ.ಎಂ. : ಪ್ರಾಚೀನ ಕರ್ನಾಟಕದ ಆಡಳಿತದ ವಿಭಾಗಗಳು, (ಸಂ.೧) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೦೬. ಕಲಬುರ್ಗಿ ಎಂ.ಎಂ. (ಸಂ.): ಧಾರವಾಡ ಜಿಲ್ಲಾ ಶಾಸನಸೂಚಿ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫.

೦೭. ಕಪಟರಾಳ ಕೃಷ್ಣರಾಯರು : ಕರ್ನಾಟಕ ಸಂಸ್ಕೃತಿ ಶೋಧನೆ, ಧಾರವಾಡ, ೧೯೭೦

೦೮. ಕುಪ್ಪುಸ್ವಾಮಿ ಬಿ. : ಶ್ರದ್ಧೆ, ನಂಬಿಕೆ ಮತ್ತು ವೈಚಾರಿಕತೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೦.

೦೯. ಕಾಮತ್ ಸೂರ್ಯನಾಥ್ (ಸಂ.): ಧಾರವಾಡ ಜಿಲ್ಲಾ ಗೆಜೆಟಿಯರ್ (ಪರಿಷ್ಕೃತ ಆವೃತ್ತಿ) ಕರ್ನಾಟಕ ಸರ್ಕಾರ, ಬೆಂಗಳೂರು. ೧೯೯೫.

೧೦. ಕಾಮತ್ ಸೂರ್ಯನಾಥ್ : ಇತಿಹಾಸ ದರ್ಶನ, ಸಂ.೫, ಕ.ಇ.ಅ. ರಿ. ಬೆಂಗಳೂರು, ೧೯೯೦.

೧೧. ಕಾಮತ್ ಸೂರ್ಯನಾಥ್ : ಇತಿಹಾಸ ದರ್ಶನ ಸಂ.೭ ಕ.ಇ.ಅ. ರಿ. ಬೆಂಗಳೂರು, ೧೯೯೨

೧೨. ಕುಲಕರ್ಣಿ ಜಿ.ಬಿ. : ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ.) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೨೦೦೧.

೧೩. ಕೊಪ್ಪ ಎಸ್.ಕೆ., : ತರ್ದವಾಡಿನಾಡು ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦.

೧೪. ಗೋಪಾಲ. ಬಾ.ರಾ.: ಕರ್ನಾಟಕದಲ್ಲಿ ನವಶಿಲಾಯುಗ, ಧಾರವಾಡ, ೧೯೭೧

೧೫. ಚಂದ್ರಶೇಖರ ವಸ್ತ್ರದ, ಅರ್ಜುನ್ ಗೊಳಸಂಗಿ: ಕೃತುಪುರ, ಪ್ರಕಾಶಕರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಗದಗ, ೨೦೦೮.

೧೬. ಚಂದ್ರಶೇಖರ ಕಂಬಾರ: ಕನ್ನಡ ಜಾನಪದ ವಿಶ್ವಕೋಶ, ಸಂ.೧೨, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೮೫.

೧೭. ಚಿದಾನಂದಮೂರ್ತಿ ಎಂ.: ಸಂಶೋಧನಾ ತರಂಗ, ಸರಸ ಸಾಹಿತ್ಯ ಪ್ರಕಾಶನ, ಬೆಂಗಳೂರು, ೧೯೭೦

೧೮. ಚಿದಾನಂದಮೂರ್ತಿ: ಜನ-ಜನಪದ-ಜಾನಪದ, ಸಂ.೩, ಸ್ವಪ್ನಬುಕ್ ಹೌಸ್, ಬೆಂಗಳೂರು, ೨೦೦೨.

೧೯. ಚಿದಾನಂದಮೂರ್ತಿ ಎಂ. : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯.

೨೦. ಚಿಂಚೋಳಿ ಸುಭಾಸ : ಪ್ರಾಕ್ತನಶಾಸ್ತ್ರದ ಹಿನ್ನಲೆಯಲ್ಲಿ ಬಿಜಾಪುರ ಜಿಲ್ಲೆಯಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯ ಅಧ್ಯಯನ. (ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯.

೨೧. ಚನ್ನಕ್ಕ ಎಲಿಗಾರ: ಬಂಕಾಪುರ ಶೋಧ, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೯೦.

೨೨. ಚುರ್ಚಿಹಾಳಮಠ, ಸಿ.ಎಂ.: ಮುಂಡರಗಿ ನಾಡು ಸ್ವಾತಂತ್ರ್ಯ ಸಂಗ್ರಾಮ ತಾಲೂಕು ಸ್ವಾತಂತ್ರ್ಯ ಯೋಧರ ಸಂಘ ಮುಂಡರಗಿ, ೧೯೯೯.

೨೩. ಜವರೇಗೌಡ ದೇ.: ಸ್ಥಳನಾಮ ವ್ಯಾಸಾಂಗ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೦.

೨೪. ತಾಳ್ತಜೆ ವಸಂತಕುಮಾರ : ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಮುಂಬೈ ವಿಶ್ವವಿದ್ಯಾಲಯ, ಕನ್ನಡ ಅಧ್ಯಯನದ ಪರವಾಗಿ ವಿನಯ ಪ್ರಕಾಶನ, ಬೆಂಗಳೂರು, ೧೯೮೮

೨೫. ತಿಪ್ಪೇರುದ್ರಸ್ವಾಮಿ ಎಚ್: ೧೯೬೮, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೬೮.

೨೬. ದಾನಪ್ಪಗೌಡ್ರು, ಟಿ.ಬಿ., ಲಕ್ಕುಂಡಿ ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಎಂ.ಫಿಲ್ ಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦.

೨೭. ; ಯರಿzರಿ ತ್ರಿ W ಹಾ ಹ ಕನ್ನಡ ಐತಿಹ್ಯಗಳು, ತೇಜಸ್ವನಿ ಪ್ರಕಾಶನ, ಮಡಿಕೇರಿ, ೧೯೭೮.

೨೮. ದೇಸಾಯಿ ಪಿ.ಬಿ.: ಕರ್ನಾಟಕದ ಕಲಚೂರಿಗಳು, ಧಾರವಾಡ, ೧೯೮೯. ಕರ್ನಾಟಕ ಇತಿಹಾಸ, ಧಾರವಾಡ, ೧೯೬೭

೨೯. ದ್ಯಾಮನಗೌಡರ ವ್ಹಿ.ಕೆ.: ಡಂಬಳ ಮತ್ತು ಅದರ ಪರಿಸರ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦.

೩೦. ನರಸಿಂಹಚಾರ್ ಆರ್. : ಕರ್ನಾಟಕ ಕವಿಚರಿತೆ, ಸಂ.೧ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೬೧.

೩೧. ನಂದಿಮಠ ಎಸ್.ಸಿ. : ಕರ್ನಾಟಕದ ಧರ್ಮಗಳು, ಬೆಂಗಳೂರು, ೧೯೭೫.

೩೨. ನಾಗಯ್ಯ ಜೆ.ಎಂ. : ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಅಧ್ಯಯನ ಅಕಾಡೆಮಿ ಶ್ರೀನಾಗನೂರು, ರುದ್ರಾಕ್ಷಿಮಠ, ಬೆಳಗಾವಿ. ೧೯೯೨.

೩೩. ನಾಗೇಗೌಡ ಎಚ್.ಎಲ್. : ಪ್ರವಾಸಿ ಕಂಡ ಇಂಡಿಯಾ, ಸಂ.೧-೨. ೧೯೬೪.

೩೪. ನಾಯಕ ಹಾ.ಮಾ. (ಪ್ರ.ಸಂ) ಕರ್ನಾಟಕ ಕನ್ನಡ ವಿಷಯಗಳ ವಿಶ್ವಕೋಶ, ಮೈಸೂರು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೩೫. ಪರಮಶಿವಯ್ಯ ಜಿ.ಶಂ. : ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೭೯.

೩೬. ಪಾಟೀಲ್ ಬಿ.ಎಸ್. (ಸಂ.): ಕಪೋತಗಿರಿ (ಸ್ಮರಣ ಸಂಚಿಕೆ),ಗದಗ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ, ಮುಂಡರಗಿ, ೨೦೦೦.

೩೭. ಪುರುಷೋತ್ತಮ ಬಿಳಿಮಲೆ: ಹಂಪಿ ಜಾನಪದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೬

೩೮. ಪುರುಷೋತ್ತಮ ಬಿಳಿಮಲೆ, : ಕರಾವಳಿ ಜಾನಪದ, ಮಂಗಳಗಂಗೋತ್ರಿ, ದಕ್ಷಿಣ ಕನ್ನಡ ಜಿಲ್ಲೆ. ೧೯೭೦.

೩೯. ಪುಟ್ಟಪ್ಪ ಕೆ.ವಿ. (ಸಂ.) : ಯುಗಯಾತ್ರೀ. ಭಾರತೀಯ ಸಂಸ್ಕೃತಿ, ಸಂ.೧. ಮೈಸೂರು. ೧೯೭೦.

೪೦. ಪಂಚಮುಖಿ ಆರ್.ಎಸ್. : ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ. ೧೯೬೧.

೪೧. ಪ್ರಭಾಕರ ಎಂ.ಎನ್: ದೇವಾಲಯ ವಾಸ್ತುಚಂದ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦.

೪೨. ಪಂಚಮುಖಿ ಆರ್.ಎಸ್. ಕರ್ನಾಟಕ ಅರಸುಮನೆತನಗಳು, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ.

೪೩. ಪಾಟೀಲ ಬಿ.ಎಸ್. ಬೆಳವಟಗಿ, ಎಂ. (ಸಂ.): ಮೃಡದೀಪ್ತಿ (ಸ್ಮರಣ ಸಂಚಿಕೆ) ಶ್ರೀ ಜಗದ್ಗುರು ಅನ್ನದಾನೀಶ್ವರ ವಿದ್ಯಾಸಮಿತಿ. ಮುಂಡರಗಿ, ೨೦೦೦.

೪೪. ಮುಗಳಿ ರಂ.ಶ್ರೀ (ಅನು) : ಕರ್ನಾಟಕ ಸಾಂಸ್ಕೃತಿಕ ಪರಂಪರೆ. ಶಾಸ್ತ್ರಿ. ಕೆ.ಜಿ. ಮತ್ತು ಪಾಟೀಲ್ ಎಸ್.ಪಿ., ಧಾರವಾಡ, ೧೯೭೬.

೪೫. ಬಸವರಾಜ ಪೋಲೀಸ್‌ಪಾಟೀಲ್: ಜಾನಪದ ಸಿರಿ, ವಿದ್ಯಾ ಸಾಹಸ ಪ್ರಕಾಶನ, ಗುಲಬರ್ಗಾ. ೧೯೯೦.

೪೬. ಬಸವರಾಜ ಪೋಲೀಸ್ ಪಾಟೀಲ್: ಜಾನಪದ ಚಿಂತನೆ, ಅಮರ ಪ್ರಕಾಶನ, ಗುಲಬರ್ಗಾ, ೨೦೦೧.

೪೭. ಬಾಲಸುಬ್ರಮಣ್ಯ, ವಾಸುದೇವನ್ ಸಿ.ಎಸ್, ರಮೇಶ ನಾಯಕ: ಕರ್ನಾಟಕ ದೇವಾಲಯ ಕೋಶ, ಗದಗ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೪೮. ಬೋರಲಿಂಗಯ್ಯ ಹಿ.ಚಿ.: ಕರ್ನಾಟಕದ ಜನಪದ ಕಲೆಗಳ ಕೋಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಮೇವುಂಡಿ ಮಲ್ಲಾರಿ, ಕನ್ನಡ ಶಾಸನ ಕವಿಗಳು, ಧಾರವಾಡ ೧೯೭೪.

೫೦. ರಘುನಾಥಭಟ್ ಎಚ್.ಆರ್.: ಕರ್ನಾಟಕ ಶಾಸನ ಮತ್ತು ಕಲೆ, ಧಾರವಾಡ

೫೧. ರಮೇಶ ಕೆ.ವಿ. ಕರ್ನಾಟಕ: ಶಾಸನ ಸಮೀಕ್ಷೆ, ಮೈಸೂರು. ೧೯೭೧.

೫೨. ರಾಜಶೇಖರ್ ಎಸ್. : ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತಾ ಪಬ್ಲಿಕೇಶನ್ಸ್, ಧಾರವಾಡ, ೧೯೮೮

೫೩. ರಾಮಚಂದ್ರರಾವ್ ಎಸ್.ಕೆ.:ಮೂರ್ತಿಶಿಲ್ಪ ನೆಲೆ ಹಿನ್ನೆಲೆ, ಬೆಂಗಳೂರು, ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫.

೫೪. ರಾಮಯ್ಯ ಕೋಟಗಾನಹಳ್ಳಿ: ಸಿಂದ್ ಮಾದಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೫೫. ಲಕ್ಕಪ್ಪಗೌಡ (ಪ್ರ.ಸಂ): ರಾಮಚಂದ್ರೇಗೌಡ. ಹಿ.ಚಿ., ಕೃಷ್ಣಮೂರ್ತಿ ಹಾನೂರು (ಸಹ ಸಂ.)....ಸುವರ್ಣ ಜಾನಪದ ಸಂ.೧ ಮತ್ತು ೨. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮.

೫೬. ಲಕ್ಷ್ಮಿದೇವಿ ಎಲ್: ಕೋಲಾರ ಜಿಲ್ಲೆಯ ಐತಿಹ್ಯಗಳು (ಅಪ್ರಕಟಿತ ಪಿಎಚ್.ಡಿ. ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬

೫೭. ಲಕ್ಷ್ಮಣ ತೆಲಗಾವಿ: ಹರತಿ ಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ. ೧೯೮೫

೫೮. ಲಕ್ಷ್ಮಣ ತೆಲಗಾವಿ: ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೮೫.

೫೯. ಲಕ್ಷ್ಮಣ ತೆಲಗಾವಿ: ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೫

೬೦. ವಸು : ಮೌಖಿಕ ಇತಿಹಾಸ, ಅಂಕಿತ ಪುಸ್ತಕ, ಬೆಂಗಳೂರು, ೨೦೦೪.

೬೧. ವರದರಾಜರಾವ್ ಜಿ.: ಕುಮ್ಮಟದುರ್ಗ, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೫.

೬೨. ಶಿವತಾರಕ್ ಕೆ.ಬಿ.: ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೧.

೬೩. ವಾಸುದೇವ್ ಬಡಿಗೇರ (ಸಂ): ಕುರುಗೋಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೪.

೬೪. ವಿವೇಕ ರೈ ಬಿ.ಎ. (ಸಂ) : ಅನ್ವಯಿಕ ಜಾನಪದ ರಾಜೇಶ್ ಪವರ್ ಪೆಸ್, ಮಂಗಳಗಂಗೋತ್ರಿ, ೧೯೮೫.

೬೫. ಶೇಷಶಾಸ್ತ್ರಿ ಆರ್: ಕರ್ನಾಟಕದ ವೀರಗಲ್ಲುಗಳು. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨.

೬೬. ಶೇಷಗಿರಿರಾವ್ ಎಲ್.ಎಸ್.: ಕಿರಿಯರ ಕರ್ನಾಟಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

೬೭. ಸುಬ್ಬಣ್ಣ ರೈ: ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಮುಂಬೈ ವಿಶ್ವವಿದ್ಯಾಲಯ, ಮಾಣಿ ಜೂನಿಯರ್ ಛೇಂಬರ್, ಮಾಣಿ, ೧೯೯೪.

೬೮. ಶ್ರೀನಿವಾಸಮೂರ್ತಿ ಎಚ್.ವಿ. ಮತ್ತು ರಾಮಕೃಷ್ಣ ಆರ್.: ಸಮಗ್ರ ಕರ್ನಾಟಕ ಚರಿತ್ರೆ, ಬೆಂಗಳೂರು, ೧೯೯೫.

೬೯. ಸಾಲತೊರೆ ಬಿ.ಎ.: ಕನ್ನಡ ನಾಡಿನ ಚರಿತ್ರೆ ಭಾಗ-೧. ಬೆಂಗಳೂರು, ೧೯೫೩.

೭೦. ಹಿರೇಮಠ ಆರ್.ಸಿ. (ಸಂ): ಕನ್ನಡ ಶಾಸನ ಸಂಪದ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫.

## English Books

1. Altekar: Rastrakutas and their Times, Orintal Book Agency, Poona, 1967.
2. Basavaraja K.R.:History and culturral of Karnataka, Chalukyas of Kalyana, 1966.
3. Cousens Henry: The Chalukyan Architecture of India, New Imperial Series, Volume XLII, Imperial series India, Central Publication Branch, Culcutta.1926.
4. Desai. P.B. (ED) : History of Karnataka, Kannada Research Institute, Karnataka University, Dharwad.1970.
5. Panchamukhi R.S. : Archaeology of Karnataka, Kannada Research Institute, Karnataka University, Dharwad.1953.
6. Rajashekhar S. Karnataka Architecture, Sujata Publication Dharwad. 1985.
7. Mechler A.M. and Ruth McMullin, Ed. Oral History, Collections, Bowker, Newyork and London, 1975.

## Epigraphy Volumes

Karnataka Inscriptions Vol-KRI, Dharwad

Epigraphia India Vol..KRI, Dharwad

Annual Reports on South India Epigraphy, 1940-41.

South Indian Inscriptions Vol-XI, XVI

## English Journals

Epigraphia Indica, New Delhi, Vol-1, I to XXXXV

Indian Archaeology

Journal of the Karnakata University (Social Science) Dharwad.

The India Antiquary, Bombay.

The Journal of Orla History

## ನಿಯತಕಾಲಿಕೆಗಳು

ಕರ್ನಾಟಕ ಇತಿಹಾಸ ಅಕಾಡೆಮಿಯ ನಿಯತಕಾಲಿಕೆಗಳು.

ಕರ್ನಾಟಕ ಇತಿಹಾಸ ಪರಿಷತ್ತಿನ ನಿಯತಕಾಲಿಕೆಗಳು.

ಶಾಸನ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚರಿತ್ರೆ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಸಂಕ್ಷೇಪಗಳು

| | | |
|---|---|---|
| ೦೧. | ಕ.ಭಾ. | ಕರ್ನಾಟಕ ಭಾರತಿ |
| ೦೨. | ಇ.ಐ. | ಎಫಿಗ್ರಾಫಿಯಾ ಇಂಡಿಕಾ |
| ೦೩. | ಇ.ಸಿ. | ಎಫಿಗ್ರಾಫಿಯಾ ಕರ್ನಾಟಕ |
| ೦೪. | ಎಸ್.ಐ.ಐ. | ಸೌಥ್ ಇಂಡಿಯನ್ ಇನ್ಸ್‌ಕ್ರಿಪ್ಸನ್ಸ್ |
| ೦೫. | ಐ.ಎ. | ಇಂಡಿಯನ್ ಆಂಟಿಕ್ವೆರಿ |
| ೦೬. | ಧಾ.ಜಿ.ಶಾ.ಸೂ. | ಧಾರವಾಡ ಜಿಲ್ಲಾ ಶಾಸನ ಸೂಚಿ |
| ೦೭. | ಧಾ.ಜಿ.ಗೆ. | ಧಾರವಾಡ ಜಿಲ್ಲಾ ಗೆಜೆಟಿಯರ್ |
| ೦೮. | ಪ್ರ.ಸಂ. | ಪ್ರಧಾನ ಸಂಪಾದಕರು |



ಮುಂಡರಗಿ ಪರಿಸರದಲ್ಲಿ ಹರಿಯುವ ತುಂಗಭದ್ರಾ ನದಿ.



ಬಿದರಳ್ಳಿ ಗ್ರಾಮ ಪರಿಸರದಲ್ಲಿಯ ವಿಶಿಷ್ಟ ಶಿಲೆ



ಕಪ್ಪತ್ತಗುಡ್ಡದ ಮೇಲೆ ಇರುವ ಗಾಳಿಯಂತ್ರಗಳು



ಮೇವುಂಡಿಯ ವೆಂಕಟೇಶ್ವರ ಗುಡಿಯ ಮುಂಭಾಗದಲ್ಲಿಯ ಶಾಸನ



ಹಿರೇವಡ್ಡಟಿಯ ಕಲ್ಮೇಶ್ವರ ದೇವಾಲಯದಲ್ಲಿಯ ಶಾಸನ



ಶಿರೂರಿನಲ್ಲಿಯ ಶಾಸನ



ಡಂಬಳದ ದೊಡ್ಡಬಸಪ್ಪ ದೇವಾಲಯದ ಮುಂಭಾಗದಲ್ಲಿರುವ ಶಾಸನ



ತ್ರಾಮಗುಂಡಿ ಕಲ್ಮೇಶ್ವರ ಗುಡಿಯ ಮುಂದಿನ ಶಾಸನ



ಪೇಠಾಲೂರಿನ ನಾಗನಾಥೇಶ್ವರ ದೇವಾಲಯದಲ್ಲಿಯ ಶಾಸನ



ಗುಮ್ಮಗೋಳದ ಗೋಣಿಬಸವೇಶ್ವರ ದೇವಾಲಯ



ಗೋಣಿಬಸವೇಶ್ವರ ದೇವಾಲಯದ ಪಾರ್ಶ್ವನೋಟ



ಮುಂಡರಗಿಯ ಕನಕ ನರಸಿಂಹ ದೇವಾಲಯ



ಮೇವುಂಡಿಯ ವೆಂಕಟೇಶ್ವರ ದೇವಾಲಯ







ಶಿರೂರಿನ ಮಳಗೇಶ್ವರ ದೇವಾಲಯ



ಡಂಬಳದ ದೊಡ್ಡಬಸಪ್ಪ ದೇವಾಲಯ



ಡಂಬಳದ ಜಪದ ಭಾವಿ



ಡಂಬಳದ ಸಿದ್ಧೇಶ್ವರ ದೇವಾಲಯ



ಡಂಬಳದ ಸೋಮೇಶ್ವರ ದೇವಾಲಯ



ಮೇವುಂಡಿಯಲ್ಲಿಯ ನವ ಶಿಲಾಯುಗದ ಆಯುಧ



ಬರದೂರಿನ ನರಸಿಂಹ ಗುಡಿಯಲ್ಲಿಯ ಕಂಬ



ಬಿದರಳ್ಳಿಯ ಸೋಮನಾಥ ದೇವಾಲಯದ ಕಂಬಗಳು



ಬರದೂರು ಭರತೇಶ್ವರ ದೇವಾಲಯ



ಪೇಠಾಲೂರಿನ ನಾಗನಾಥೇಶ್ವರ ದೇವಲಾಯ



ಶಿರೂರಿನ ಕೃಷ್ಣ ದೇವಾಲಯ



ಮೇವುಂಡಿಯ ದಿಡಿಗೇಶ್ವರ ದೇವಾಲಯ



ಮೇವುಂಡಿಯಲ್ಲಿಯ ನವ ಶಿಲಾಯುಗದ ಆಯುಧ ಪಡೆದುಕೊಳ್ಳುತ್ತಿರುವದು.



ಮೇವುಂಡಿಯಲ್ಲಿಯ ನವ ಶಿಲಾಯುಗದ ನಲೆ



ಹಿರೇವಡ್ಡಟ್ಟಿಯ ಸೋಮೇಶ್ವರ ದೇವಾಲಯ



ಸಿಂಗಟಾಲೂರಿನ ವೀರಭದ್ರನ ಬಗ್ಗೆ ಸ್ಥಳೀಯರಿಂದ ಮಾಹಿತಿ ಸಂಗ್ರಹ



ಕೊರ್ಲಹಳ್ಳಿಯ ಸಿದ್ಧೇಶ್ವರ ದೇವಾಲಯ



ಹಿರೇವಡ್ಡಟ್ಟಿಯಲ್ಲಿಯ ಬತೇರಿ



ಡಂಬಳದ ಮಹಿಷಮರ್ದಿನಿ ಶಿಲ್ಪ



ಪೇಠಾಲೂರಿನ ವೀರಭದ್ರೇಶ್ವರ



ವಿಠ್ಠಲಾಪೂರದ ವಿಠ್ಠಲ ಶಿಲ್ಪ



ವಿಠ್ಠಲಾಪೂರದ ರಸಲಿಂಗ



ಮೇವುಂಡಿಯ ವೆಂಕಟೇಶ್ವರ ಶಿಲ್ಪ



ಡಂಬಳದ ನಂದಿ ಶಿಲ್ಪ



ಮೇವುಂಡಿಯ ಕೀಳ್ಗುಂಟೆ ಶಾಸನ ಶಿಲ್ಪ



ಶಿರೂರಿನ ಕೃಷ್ಣ ಶಿಲ್ಪ



ಮೇವುಂಡಿಯ ಅನಂತಶಯನ ಶಿಲ್ಪ



ಪೇಠಾಲೂರಿನ ಗಜಲಕ್ಷ್ಮೀ ಶಿಲ್ಪ



ಶಿರೂರಿನ ಜೈನ ಶಿಲ್ಪ



ಡೋಣಿಯ ಡೋಣಿಕಮ್ಮಾ ಶಿಲ್ಪ



ಮುಂಡರಗಿಯ ಗುಡ್ಡದ ಮೇಲಿನ ನೂರೊಂದು ಶಿವಲಿಂಗಗಳು



ಪೇಠಾಲೂರಿನ ನಾಗನಾಥೇಶ್ವರ ಗುಡಿಯಲ್ಲಿಯ ಸಪ್ತ ಮಾತೃಕೆ ಶಿಲ್ಪ



ಗುಮ್ಮಗೋಳದ ಗೋಣಿ ಬಸವೇಶ್ವರ (ನಂದಿ)



ಗುಮ್ಮಗೋಳದ ಗಣಪತಿ ಶಿಲ್ಪ



ಬಿದರಳ್ಳಿಯ ರೇಣುಕಾದೇವಿ



ಶಿರೂರಿನ ಕೃಷ್ಣ ದೇವಾಲಯದ ಗೋಡೆಯ
ಮೇಲಿನ ಮಿಥುನ ಶಿಲ್ಪಗಳು


ತಾಮ್ರಗುಂಡಿಯ ನಾಗ ಶಿಲ್ಪ


ಡೋಣಿಯ ಹುಲಿಬೇಟೆ ಕಲ್ಲು


ಬಿದರಳ್ಳಿಯ ಚತುರ್ಮುಖ ಬ್ರಹ್ಮ ಶಿಲ್ಪ


ಸಿಂಗಟಾಲೂರಿನ ವೀರಭದ್ರೇಶ್ವರ


ಬಿದರಳ್ಳಿ ರೇಣುಕಾದೇವಿಯ ಪಾದಗಳು


ಡಂಬಳದ ಕೆರೆ (ಗೋಣ ಸಮುದ್ರ)

